# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೫, ೨೦೧೬ (ಭಾದ್ರಪದ ೨೪, ಶಕ ವರ್ಷ ೧೯೩೮)<br>Bengaluru, Thursday, September 15, 2016 ( Bhadrapada 24, Shaka Varsha 1938) | ಸಂಚಿಕೆ ೩೭<br>Issue 37 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕಂದಾಯ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 5 ಎಲ್‌ಜಿಟಿ 2016, ಬೆಂಗಳೂರು ದಿನಾಂಕ:22-06-2016.**

**ನಮೂನೆ-29**

**68ನೇ ಪ್ರಕರಣದ (5)ನೇ ಉಪ-ಪ್ರಕರಣದ ಮೇರೆಗಿನ ಘೋಷಣೆ-ನಿಯಮ 96**

ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ 68ನೇ ಪ್ರಕರಣದ (5)ನೇ ಉಪ-ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕ:28-05-2015, ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ:ಎಲ್‌ಎನ್‌ಡಿ(ಟಿಎಂಕೆ)/ಸಿಆರ್/134/2014-15 ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ರಸ್ತೆ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಮತ್ತು ಜಿಲ್ಲೆಯ ಡೆಪ್ಯೂಟಿ ಕಮಿಷನರ್ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ, ಸಾರ್ವಜನಿಕ ರಸ್ತೆ ಅಥವಾ ಅದರ ಮೇಲಿನ ಸಾರ್ವಜನಿಕ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ಜಮೀನು ಭಾಗ ಇತ್ಯಾದಿ ಇರುವ ಗ್ರಾಮ | ತುಮಕೂರು ಗ್ರಾಮ |
| ತಾಲ್ಲೂಕು | ತುಮಕೂರು |
| ಜಿಲ್ಲೆ | ತುಮಕೂರು |
| ಸಾರ್ವಜನಿಕ ಹಕ್ಕು ಮೊಟಕುಗೊಳಿಸುತ್ತಿರುವ ಸರ್ವೆ ನಂ. ವಿವರ | ಸರ್ವೆ ನಂಬರ್ ಇಲ್ಲ |
| ವಿಸ್ತೀರ್ಣ | 0-29 ಗುಂಟೆ (ಹದ್ದುಗಿಡದ ಓಣಿ) |

**PR. 542**

**SC. 50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರೇವಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ.(ಭೂಮಂಜೂರಾತಿ-3)

### ಸಹಕಾರ ಇಲಾಖೆ

**ಸಹಕಾರಿಗಳ ಸಹಾಯಕ ನಿಬಂಧಕರ ಕಚೇರಿ, ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು**

**ವಿಷಯ:** ಅಮಲ್ಜಾರಿ ಸಂ. ಸಿ.ಇ.ಪಿ. 01/2015-16 ಮತ್ತು ದಾವಾ ಸಂ. 07/2011-12 ನರೇಶ್‌ಬಾಬು ಬಿನ್ ಶಿವಾಜಿರಾವ್ ಮತ್ತು ಇತರರು ತುಮಕೂರು ಇವರ ಸ್ಥಿರಾಸ್ತಿಯನ್ನು ಏಕಲವ್ಯ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ, ತುಮಕೂರು ಇದರ ಹೆಸರಿಗೆ ವರ್ಗಾಯಿಸಿ ಸ್ಥಿರೀಕರಣ ಆದೇಶ ನೀಡುವ ಬಗ್ಗೆ.

ಉಲ್ಲೇಖ : 1) ಮಾರಾಟಾಧಿಕಾರಿಗಳು, ಏಕಲವ್ಯ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ, ತುಮಕೂರು ಇವರ ಪತ್ರ ದಿನಾಂಕ:22-2-2016.

2) ಮುಖ್ಯ ಕಾರ್ಯನಿವಾಹಣಾಧಿಕಾರಿ, ಏಕಲವ್ಯ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ, ತುಮಕೂರು ಇವರ ಪತ್ರ ದಿ: 22-2-2016.

3) ಈ ಕಛೇರಿಯಿಂದ ನೀಡಲಾದ ನೋಟಿಸು ಸಂ. ದಿನಾಂಕ: 24-02-2016.

ಏಕಲವ್ಯ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ, ತುಮಕೂರು, ಈ ಸಹಕಾರಿಯು ಕರ್ನಾಟಕ ಸಹಕಾರ ಸೌಹಾರ್ದ ಕಾಯ್ದೆ, 1997 ಮತ್ತು ನಿಯಮ 2004 ರನ್ವಯ ನೋಂದಾಯಿತವಾಗಿರುತ್ತದೆ ಮತ್ತು ನೋಂದಾಯಿತ ಉಪವಿಧಿಯನ್ವಯ ಕಾರ್ಯನಿರ್ವಹಿಸುತ್ತಿದೆ.

ಈ ಸಹಕಾರಿಯ ಹಿಂದಿನ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಯಾದ ಫವತಿ ಎಸ್. ಶಿವಾಜಿರಾವ್ ರವರು ಸಹಕಾರಿಯ ಹಣವನ್ನು ದುರುಪಯೋಗಪಡಿಸಿಕೊಂಡಿದ್ದು, ದುರುಪಯೋಗದ ಹಣವನ್ನು ಅವರ ವಾರಸುದಾರರಾದ 1. ನರೇಶ್‌ಬಾಬು ಬಿನ್ ಲೇ ಶಿವಾಜಿರಾವ್, 2. ಲೀಲಾವತಿ ಕೋಂ ಲೇ॥ ಶಿವಾಜಿರಾವ್ 3. ಚಂದ್ರಶೇಖರ್ ರಾವ್ ಬಿನ್ ಲೇ॥ ಶಿವಾಜಿರಾವ್ 4. ಮುಖೇಶ್ ಬಿನ್ ಲೇ॥ ಶಿವಾಜಿರಾವ್, ಕೇರಾಫ್ ಕೃಷ್ಣಯ್ಯ, ನಿವೃತ್ತ ನಿರೀಕ್ಷಕರು, ವಾಟರ್ ಟ್ಯಾಂಕ್ ಹತ್ತಿರ, 2ನೇ ಕ್ರಾಸ್, ಶಾಂತಿನಗರ, ತುಮಕೂರು ಇವರು ಸಹಕಾರಿಗೆ ದುರುಪಯೋಗದ ಹಣವನ್ನು ಪಾವತಿ ಮಾಡದೇ ಇದ್ದುದರಿಂದ ಇವರ ವಿರುದ್ಧ ದುರುಪಯೋಗದ ಹಣದ ವಸೂಲಾತಿಗಾಗಿ ಸಹಕಾರಿಗಳ ಸಹಾಯಕ ನಿಬಂಧಕರು, ತುಮಕೂರು ಇವರ ನ್ಯಾಯಲಯಕ್ಕೆ ಸಹಕಾರಿಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ರವರು ಕಲಂ 41(1)(ಬಿ) ಪ್ರಕಾರ ಸದರಿ ದಾವೆಯನ್ನು ಇತ್ಯರ್ಥ ಪಡಿಸಲು ಈ ಕಛೇರಿಗೆ ಕಳುಹಿಸಿರುತ್ತಾರೆ. ಈ ದಾವೆ ಸಂಖ್ಯೆ: ಜೆಆರ್‌ಬಿ/ಸೌ/ದಾವಾ/07/2011-12 ತೀರ್ಪಿನ ದಿನಾಂಕ: 27-8-2012 ರಂದು ಡಿಕ್ರಿಯಾಗಿದ್ದು, ಸದರಿ ಡಿಕ್ರಿಯಾನುಸಾರ ಅಮಲ್ಜಾರಿ ಸಂಖ್ಯೆ:ಸಿ.ಇ.ಪಿ.01/2015-16 ಪಡೆಯಲಾಗಿದೆ.

ತೀರ್ಪಿನ ನಂತರವೂ ಸಹ ದುರುಪಯೋಗದ ಹಣವನ್ನು ಸಹಕಾರಿಗೆ ಜಮಾ ಆಗದೇ ಇರುವ ಕಾರಣದಿಂದ ಡಿಕ್ರಿಯನ್ನು ವಸೂಲಿ ಕ್ರಮಕ್ಕಾಗಿ ಅಮಲ್ಜಾರಿ ಸಿ.ಇ.ಪಿ.01/2015-16 ರನ್ವಯ ಮಾರಾಟಾಧಿಕಾರಿಯವರ ವಶಕ್ಕೆ ನೀಡಲಾಗಿತ್ತು, ಮಾರಾಟಾಧಿಕಾರಿಗಳು ವಸೂಲಿ ಕ್ರಮ ನಡೆಸಿ ಡಿಕ್ರಿ ಬಾಕಿದಾರರ ಸ್ಥಿರಾಸ್ತಿಯನ್ನು ದಿನಾಂಕ: 8-12-2015 ರಂದು ಮಾರಾಟ ಮಾಡಲು ದಿನಾಂಕ ನಿಗಧಿಪಡಿಸಿರುತ್ತಾರೆ. ಈ ದಿನಾಂಕಕ್ಕೆ ದುರುಪಯೋಗದ ಮೊತ್ತ ಒಟ್ಟು ₹. 41,72,330/- ಮತ್ತು ಬಡ್ಡಿ ಇತರೆ ಖರ್ಚುಗಳ ಬಾಕಿ ಇರುವುದಾಗಿ ಮಾರಾಟಾಧಿಕಾರಿಗಳ ಪತ್ರದಿಂದ ಕಂಡುಬಂದಿರುತ್ತದೆ. ಸದರಿ ದಿನದಂದು ನಡೆಸಿದ ಬಹಿರಂಗ ಹರಾಜು ಪ್ರಕ್ರಿಯೆಯಲ್ಲಿ ಬಿಡ್ಡುದಾರರು ಕಡಿಮೆ ಬೆಲೆಗೆ ಬಿಡ್ ಮಾಡಿರುವುದರಿಂದ ಕರ್ನಾಟಕ ಸೌಹಾರ್ದ ಸಹಕಾರಿ 2004ರ ನಿಯಮ 18(3) ರ ಪ್ರಕಾರ ಈ ಕಛೇರಿಯಿಂದ ನೋಟೀಸನ್ನು ನೀಡಿ ದಿನಾಂಕ: 8-12-2015ಕ್ಕೆ ಸಹಕಾರಿಗೆ ಪಾವತಿಸಬೇಕಾದ ದುರುಪಯೋಗದ ಮೊತ್ತ ₹. 41,72,330/- ಗಳನ್ನು 30 ದಿವಸದೊಳಗಾಗಿ ಬಡ್ಡಿ ಸಮೇತ ಪಾವತಿಸಿ, ಪಾವತಿಸಿದ ಬಗ್ಗೆ ದಾಖಲಾತಿ ಮತ್ತು ಈ ಸಂಬಂಧ ಲಿಖಿತ ಆಕ್ಷೇಪಣೆಗಳಿದ್ದಲ್ಲಿ ಸಲ್ಲಿಸಲು ತಿಳಿಸಲಾಗಿತ್ತು ಹಾಗೂ ಪಾವತಿಸಲು ತಪ್ಪಿದಲ್ಲಿ ಬಹಿರಂಗ ಹರಾಜಿಗೆ ಒಳಪಡಿಸಲಾದ ಸಹಕಾರಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಏಕಲವ್ಯ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ, ತುಮಕೂರು, ಈ ಸಹಕಾರಿ ಹೆಸರಿಗೆ ಕಾನೂನು ಪ್ರಕಾರ ವರ್ಗಾಯಿಸಲಾಗುವುದೆಂದು ಸಹ ತಿಳಿಸಲಾಗಿದ್ದು, ಸದರಿ ನೋಟಿಸನ್ನು ಮುದ್ದಾಂ ಮೂಲಕ ಜಾರಿಯಾಗಿರುತ್ತದೆ. ಆದರೆ ಶ್ರೀ ನರೇಶ್‌ಬಾಬು ಬಿನ್ ಲೇ ಶಿವಾಜಿರಾವ್, ತುಮಕೂರು ಮತ್ತು ಇತರ ವಾರಸುದಾರರು ನಿಗಧಿಪಡಿಸಿದ ಅವಧಿಯಲ್ಲಿ ಮೇಲ್ಕಂಡ ಸಹಕಾರಿಗೆ ಪಾವತಿಸಬೇಕಾದ ಹಣವನ್ನು ಪಾವತಿಸಿದ ಬಗ್ಗೆಯಾಗಲಿ ಹಾಗೂ ತಮ್ಮ ಆಕ್ಷೇಪಣೆಗಳನ್ನಾಗಲಿ ಈ ಕಛೇರಿಗೆ ಸಲ್ಲಿಸಿರುವುದಿಲ್ಲ, ಆದ್ದರಿಂದ ಡಿಕ್ರಿ ಹೋಲ್ಡರ್ ಆದ ಏಕಲವ್ಯ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ, ತುಮಕೂರು, ಈ ಸಹಕಾರಿ ಹೆಸರಿಗೆ ಸ್ಥಿರಾಸ್ತಿಯನ್ನು ವರ್ಗಾವಣೆ ಮಾಡಿ ಖಾಯಂಗೊಳಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶ ನೀಡಿದೆ.

**ಆದೇಶ**

**ಕ್ರಸಂ. ಸನಿ.32.ದಾವಾ/ಮಾ.ಸ್ಥಿ/01/2016-17, ದಿನಾಂಕ: 16-06-2016.**

ಶ್ರೀಮತಿ ಸತ್ಯಕುಮಾರಿ, ಸಹಕಾರಿಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು. ಆದ ನಾನು ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ, 2004 ರ ನಿಯಮ 18(5) ಅನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಒ/ಸಿ.ಎಲ್.ಎಮ್/355/2005. ದಿನಾಂಕ:12-4-2005 ರ ರೀತ್ಯಾ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸುತ್ತಾ 1. ನರೇಶ್‌ಬಾಬು ಬಿನ್ ಲೇ ಶಿವಾಜಿರಾವ್, 2. ಲೀಲಾವತಿ ಕೋಂ ಲೇ॥ ಶಿವಾಜಿರಾವ್ 3. ಚಂದ್ರಶೇಖರ್ ರಾವ್ ಬಿನ್ ಲೇ॥ ಶಿವಾಜಿರಾವ್ 4. ಮುಖೇಶ್ ಬಿನ್ ಲೇ॥ ಶಿವಾಜಿರಾವ್, ಶಾಂತಿನಗರ, ತುಮಕೂರು ಇವರ ಸ್ಥಿರಾಸ್ತಿಯನ್ನು ಏಕಲವ್ಯ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ, ತುಮಕೂರು. ಈ ಸಂಘದ ಹೆಸರಿಗೆ ಸ್ಥಿರೀಕರಣಗೊಳಿಸಿ ವರ್ಗಾವಣೆ ಮಾಡಿ ಆದೇಶ ನೀಡಿರುತ್ತೇನೆ ನಮೂನೆ (xii) ರಲ್ಲಿ ವಿವರಿಸಿರುವಂತೆ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಸ್ಥಿರಸ್ವತ್ತನ್ನು ಸ್ಥಿರೀಕರಣಗೊಳಿಸಿದ ವರ್ಗಾವಣೆಯ ಪತ್ರವನ್ನು ಅಲಾಯಿದೆ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

**ಷರತ್ತು ಮತ್ತು ನಿಯಮಗಳು:**

1. ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ, 18(12) ರಂತೆ ಸಹಕಾರಿಗೆ ವರ್ಗಾಯಿಸಿರುವ ಸ್ವತ್ತಿನ ಬಗ್ಗೆ ಪ್ರತ್ಯೇಕ ಲೆಕ್ಕವಿಟ್ಟು ಆ ಸಂಬಂಧದಲ್ಲಿ ತಾನು ವಹಿಸಿದ ವೆಚ್ಚಗಳು ಬಾಹ್ಯ ಋಣಭಾರಗಳು, ಭೂ ಕಂದಾಯ ಮತ್ತು ಆಸ್ತಿಯ ಮೇಲಿನ ಇತರೆ ಬಾಕಿಗಳಿಗಾಗಿ ಸಂದಾಯವು ಸೇರಿದಂತೆ ಎಲ್ಲಾ ವೆಚ್ಚಗಳನ್ನು ಮತ್ತು ಸದರಿ ಸ್ವತ್ತಿನಿಂದ ಪ್ರಾಪ್ತವಾದ ಪ್ರಾಪ್ತವಾಗುವ ಎಲ್ಲಾ ಆದಾಯಗಳ ಲೆಕ್ಕವನ್ನು ವಿವರವಾಗಿ ಬರೆದಿಡುವುದು.

2. ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ, 18(13) ರಂತೆ ಸಹಕಾರಿಯು ಸಾಧ್ಯವಾದಷ್ಟು ಬೇಗ ಸಹಕಾರಿಗೆ ಹಾಗೂ ಸುಸ್ತಿದಾರನಿಗೆ ಹೆಚ್ಚು ಅನುಕೂಲವಾಗುವಂತೆ ಸ್ವತ್ತನ್ನು ಮಾರಾಟ ಮಾಡಲು ಸಾಧ್ಯವಾದಷ್ಟು ಪ್ರಯತ್ನ ಮಾಡತಕ್ಕದ್ದು ಮತ್ತು ಸ್ವತ್ತನ್ನು ಮೂಲತಃ ಹೊಂದಿದ್ದ ಸುಸ್ತಿದಾರನಿಗೆ ಯಾವಾಗಲೂ ಕೊಳ್ಳಲು ಮೊದಲನೆಯ ಅವಕಾಶ ಕೊಡತಕ್ಕದ್ದು, ಸ್ವತ್ತಿನ ಮಾರಾಟವು ರಿಜಿಸ್ಟ್ರರ್‌ರವರ ಸ್ಥಿರೀಕರಿಸುವುದಕೊಳ್ಳಪಟ್ಟಿರತಕ್ಕದ್ದು, ಮಾರಾಟದಿಂದ ಬಂದ ಉತ್ಪನ್ನವನ್ನು ಮಾರಾಟ ವೆಚ್ಚವನ್ನು ನಿಯಮ 9.12 ರಲ್ಲಿ ಉಲ್ಲೇಖಿಸಿದ ಇತರೆ ವೆಚ್ಚಗಳನ್ನು ಭರಿಸುವುದಕ್ಕೆ ಮತ್ತು ಜಾರಿಯಲ್ಲಿರುವ ಆದೇಶದಡಿ ಸುಸ್ತಿದಾರನಿಂದ ಬರಬೇಕಾದ ಬಾಕಿ ಮೊಬಲಗನ್ನು ಪಾವತಿ ಮಾಡುವುದಕ್ಕೆ ಉಪಯೋಗಿಸತಕ್ಕದ್ದು, ಮತ್ತು ಮೊಬಲಗು ಏನಾದರೂ ಮಿಕ್ಕಿ ಉಳಿದರೆ ಅದನ್ನು ಸುಸ್ತಿದಾರನಿಗೆ ಸಂದಾಯ ಮಾಡತಕ್ಕದ್ದು.

3. ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ, 18(13) ರಂತೆ ಸದರಿ ಸ್ವತ್ತು ಮಾರಾಟವಾಗುವವರೆಗೂ ಸಹಕಾರಿಯು ಸ್ವತ್ತನ್ನು ದೇಣಿಗೆ ಕೊಟ್ಟು ಅಥವಾ ಬೇರೆ ಯಾವುದಾದರೂ ರೀತಿಯಲ್ಲಿ ವಿನಿಯೋಗಿಸಿ ಸದರಿ ಸ್ವತ್ತಿನಿಂದ ಹೆಚ್ಚಿನ ವರಮಾನವನ್ನು ಪಡೆಯಲು ಹೆಚ್ಚು ಪ್ರಯತ್ನ ಮಾಡಬೇಕು.

4. ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ, 18(15) ರಂತೆ ಸಹಕಾರಿಯು ಸದರಿ ಸ್ವತ್ತಿನ ನಿರ್ವಹಣೆಯಿಂದ ಬಂದ ಉತ್ಪನ್ನದಿಂದ ಆದೇಶದಡಿ ಬರಬೇಕಾದ ಎಲ್ಲಾ ಬಾಕಿಯನ್ನು ಪಡೆದಾಗ ಸ್ವತ್ತು ಮಾರಾಟವಾಗದಿದ್ದರೆ ಅದನ್ನು ಪುನಃ ಸುಸ್ತಿದಾರನ ವಶಕ್ಕೆ ಕೊಡತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 16-6-2016 ರಂದು ನೀಡಲಾಗಿದೆ.

**ಸಹಿ/-**
ಸಹಕಾರಿಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

**ನಮೂನೆ XII**

(ಕರ್ನಾಟಕ ಸೌಹಾರ್ದ ಸಹಕಾರಿ ನಿಯಮ 2004ರ ನಿಯಮ 18(5))

ಸ್ವತ್ತುಗಳ ಹಸ್ತಾಂತರ ವರ್ಗಾವಣೆ ದೃಢೀಕರಣ ಪತ್ರ

ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ, 1997 ರ 43 ನೇ ಪ್ರಕರಣದಡಿ, ಪ್ರಸ್ತಾಪಿಸಿರುವ ಅವಾರ್ಡ್‌ನ ಆದೇಶದನ್ವಯ ಹಾಗೂ ಆವಾರ್ಡ್ ವಿರುದ್ಧ ಅಮಲ್ಜಾರಿ ಆಗಿದ್ದು, ಅಮಲ್ಜಾರಿ ಸಂ.01/2015-16 ರ ರೀತ್ಯಾ 1. ನರೇಶ್‌ಬಾಬು ಬಿನ್ ಲೇ ಶಿವಾಜಿರಾವ್, 2. ಲೀಲಾವತಿ ಕೋಂ ಲೇ॥ ಶಿವಾಜಿರಾವ್ 3. ಚಂದ್ರಶೇಖರ್ ರಾವ್ ಬಿನ್ ಲೇ॥ ಶಿವಾಜಿರಾವ್ 4. ಮುಖೇಶ್ ಬಿನ್ ಲೇ॥ ಶಿವಾಜಿರಾವ್. ಶಾಂತಿನಗರ, ತುಮಕೂರು ಇವರ ಸ್ಥಿರ ಸ್ವತ್ತನ್ನು ದಿನಾಂಕ: 8-12-2015 ರಂದು ಬಹಿರಂಗ ಹರಾಜು ಮಾಡಿದ್ದು, ಸದರಿ ಬಹಿರಂಗ ಹರಾಜು ಪ್ರಕ್ರಿಯೆಯಲ್ಲಿ ಬಿಡ್ಡುದಾರರು ಕಡಿಮೆ ಬೆಲೆಗೆ ಸವಾಲ್ ಆಗಿರುವುದರಿಂದ ಸ್ವತ್ತನ್ನು ಮಾರಾಟ ಮಾಡಲಿಕ್ಕಾಗಿರುವುದಿಲ್ಲವೆಂದು ಸದರಿ ಸಹಕಾರಿಯ ಮಾರಾಟಾಧಿಕಾರಿಗಳು ತಿಳಿಸಿರುವುದರಿಂದ ಅಂತಹ ಆಸ್ತಿಯ ಮೇಲೆ ಇರುವ ಕಾನೂನು ವಾರಸುದಾರರ ಹಕ್ಕು ಸ್ವಾಮ್ಯ ಮತ್ತು ಹಿತಾಸಕ್ತಿ ಇವರ ಈ ಆದೇಶದ ದಿನಾಂಕದಿಂದ ಸದರಿ ಸಹಕಾರಿಗೆ ಸಹಿತವಾಗತಕ್ಕದೆಂದೂ ಮತ್ತು ಆದೇಶದಲ್ಲಿನ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಸದರಿ ಸ್ವತ್ತು ಏಕಲವ್ಯ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ, ತುಮಕೂರು ರವರ ಹೆಸರಿಗೆ ಹಸ್ತಾಂತರಿಸಲಾಗಿದೆ ಎಂದು ಈ ಮೂಲಕ ಆದೇಶಿಸಲಾಗಿರುತ್ತದೆ.

**ಷೆಡ್ಯೂಲ್ ಸ್ವತ್ತಿನ ವಿವರ**

ತುಮಕೂರು ನಗರ, ವಾರ್ಡ್ ನಂ. 11, ಮರಳೂರು ಬಡಾವಣೆ, ಮು.ಖಾ. ನಂ. ಹಳೇಯದು 8716/3360 ಚಾಲ್ತಿ ಖಾತೆ ನಂ. 3360/50 (ಮೊದಲಿಗೆ ಮರಳೂರು ಗ್ರಾಮ ಸರ್ವೆ ನಂ. 57/7 ಇದಕ್ಕೆ ಇರುವ ಚೆಕ್ಕುಬಂದಿ

ಚಕ್ಕುಬಂದಿ : ಪೂರ್ವಕ್ಕೆ : ಏಮೋಜಿರಾವ್ ರವರ ನಿವೇಶನ,
ಪಶ್ಚಿಮಕ್ಕೆ : ಧರ್ಮಪ್ರಕಾಶ್ ರವರ ನಿವೇಶನ,
ಉತ್ತರಕ್ಕೆ : ರಸ್ತೆ,
ದಕ್ಷಿಣಕ್ಕೆ : ಪ್ರಭಾವತಿಬಾಯಿ ರವರ ನಿವೇಶನ,

ಈ ಮಧ್ಯೆ ಇರುವ ಮದ್ಯೇ ಇರುವ 25 * 27 ಅಡಿಗಳು ಉಳ್ಳ ನಿವೇಶನಸ್ವತ್ತು

**ಅನುಸೂಚಿ**

ದರುಪಯೋಗದ ಬಾಬ್ತು ಮೇಲ್ಕಂಡ ಸಹಕಾರಿಗೆ ಸಂದಾಯ ಮಾಡಬೇಕಾದ ಬಾಕಿ ಮೊತ್ತದ ತೀರಿಕೆಗಾಗಿ ಸದರಿಯವರ ಸ್ವತ್ತನ್ನು ಏಕಲವ್ಯ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ, ತುಮಕೂರು ರವರ ಹೆಸರಿಗೆ ಹಸ್ತಾಂತರಿಸಲಾಗಿದೆ ಎಂದು ಈ ಮೂಲಕ ದೃಢೀಕರಿಸಿರುತ್ತೇನೆ.

**ಷರತ್ತು ಮತ್ತು ನಿಯಮಗಳು**

1. ಸಹಕಾರಿಗೆ ಸ್ಥಿರೀಕರಣಗೊಳಿಸಿ ವರ್ಗಾವಣೆ ಮಾಡಲಾದ ಸ್ಥಿರ ಸ್ವತನ್ನು ಸಹಕಾರಿಯು ಉಪಯೋಗಿಸತಕ್ಕದ್ದು.
2. ಈ ಆಸ್ತಿಯನ್ನು ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಯು ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡತಕ್ಕದ್ದು.

ದಿನಾಂಕ: 16.06.2016
ಸ್ಥಳ : ತುಮಕೂರು

**ಸಹಿ/-**
ಸಹಕಾರಿಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

**PR. 544**

## COMMERCIAL TAXES DEPARTMENT

## PROCEEDINGS OF THE ASST. COMMISSIONER OF COMMERCIAL TAXES, LVO-260, MANGALURU

## DATED : 23.06.2016

**PRESENT:** **JAYAPRAKASH NAIK M.**

**SUB :** Loss of 4 'C' forms issued by M/s Raj Brother Clay Industries, TIN 29110087882 to M/s. Poona Construction Machinery & Products Pvt. Ltd.,- Reg.

**REF :** Letter dated 16.04.2016 of M/s Raj Brothers Clay Industries, Mangaluru TIN:29110087882

**Preamble:-**

M/s Raj Brothers Clay Industries, Mangaluru is a registered dealer borne on the files of this office bearing TIN: 29110087882. The dealer M/s Raj Brothers Clay Industries, in his letter cited above has intimated that **FOUR "C"** Forms issued on 30.06.2007, 02.07.2007, 07.09.2007 & 08.09.2007 bearing No's.

(1) R-3838699 for ₹.2,47,660-00 dt: 30.06.2007

(2) R-3838700 for ₹.2,15,180-00 dt: 02.07.2007

(3) R-3838700 for ₹.4,21,370-00 dt: 07.09.2007

(4) R-3838700 for ₹.3,48,870-00 dt: 08.09.2007

Which were issued to M/s Poona Construction Machinery & Products Pvt. Ltd., Shindewas Taluk, Khandala Dist. Satara were lost in the custody of purchasing dealer i.e, M/s Poona Construction Machinery & Products Pvt. Ltd., Shindewas Taluk, Khandala Dist. Satara.

Accordingly, the purchasing Dealer M/s Poona Construction Machinery & Products Pvt. Ltd., Shindewas Taluk, Khandala Dist, Satara filed copy of police complaint lodged to the jurisdictional police officer, executed indemnity bond in Form "G" in favour of Government of Karnataka as laid down under Rule, 12(2) and 12(9) of CST Act, 1956 and also produced paper cutting for having published in local papers and requested this office to issue duplicate "F" Form and also to be treated the above lost seven "F" Forms as invalid. Hence, this order:

**ORDER NO:ACCT.LVO-260/ "C" FORMS/2016-17, DATED: 23.06.2016.**

In view of the circumstances explained above, the said Four "C" Forms issued on 30.06.2007, 02,07.2007, 07.09.2007 & 08.09.2007 bearing No's. (1) R-3838699 for ₹.2,47,660-00 dt: 30.06.2007 (2) R-3838700 for ₹..2,15,180-00 dt: 02.07.2007 (3) R-3838700 for ₹..4,21,370-00 dt: 07,09.2007 (4) R-3838700 for ₹..3,48,870-00 dt: 08.09.2007 were issued to M/s Poona Construction Machinery & Products Pvt. Ltd., Shindewas Taluk, Khandala Dist. Satara by M/s Raj Brothers Clay Industries, Mangaluru TIN: 29110087882 is treated as invalid with immediate effect.

**JAYAPRAKASH NAIK M.**
Asst. Commissioner of Commercial Taxes,
Local VAT Office-260,
MANGALURU

## OFFICE OF THE ACCT, LVO-260, MANGALURU

## NOTIFICATION DATED : 23.06.2016.

### Notified Authority Under Rules.6(e) (1) of the CST (Karnataka) Rules 1957

By Virtue of the provision of Rules, 12(2) of the CST (R & T) Rules 1957, it is hereby notified for general information that the declarations in "c" form shown below are declared to be lost in the custody of purchasing dealer and also to be invalid.

| Sl No. | Number (including code No.) of declaration forms lost | Name and address of the dealer to whom declaration forms is/are issued by the department with date of F forms issued | Registration certificate No. of the dealer under CST Act 1956 | The address of the dealer to whom the declarations are sent | Date of issue of forms by the dealer | Whether lost/stolen destroyed | Amount in ₹.. |
|---|---|---|---|---|---|---|---|
| 1 | R-3838699 | Raj Brothers Clay industries, Mangaluru | 29110087882 | Poona Construction Machinery & Products Pvt. Ltd., Shindewas Taluk, Khandala Dist, Satara | 30.06.2007 | Lost | 2,47,660-00 |

| Sl No. | Number (including code No.) of declaration forms lost | Name and address of the dealer to whom declaration forms is/are issued by the department with date of F forms issued | Registration certificate No. of the dealer under CST Act 1956 | The address of the dealer to whom the declarations are sent | Date of issue of forms by the dealer | Whether lost/stolen destroyed | Amount in ₹.. |
|---|---|---|---|---|---|---|---|
| 2 | R-3838700 | Raj Brothers Clay industries, Mangaluru | 29110087882 | Poona Construction Machinery & Products Pvt. Ltd., Shindewas Taluk, Khandala Dist, Satara | 02.07.2007 | Lost | 2,15,180-00 |
| 3 | R-3838700 | Raj Brothers Clay industries, Mangaluru | 29110087882 | Poona Construction Machinery & Products Pvt. Ltd., Shindewas Taluk, Khandala Dist. Satara | 07-09-2007 | Lost | 4,21,370-00 |
| 4 | R-3838700 | Raj Brothers Clay industries, Mangaluru | 29110087882 | Poona Construction Machinery & Products Pvt. Ltd., Shindewas Taluk, Khandala Dist, Satara | 08.09.2007 | Lost | 3,48,870-00 |

**PR. 545**

**JAYAPRAKASH NAIK M.**
Asst. Commissioner of Commercial Taxes,
Local VAT Office-260,
MANGALURU.

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ನಿ.441 ರನ್ವಯ ವಸೂಲಾಧಿಕಾರಿ ರೆಡ್ಡಿ ಸಹಕಾರ ಬ್ಯಾಂಕ್ ನಿಯಮಿತ, ಬ್ಯಾಂಕ್ ರೋಡ, ಧಾರವಾಡ–580 001.**

ಅ.ಬ. ಪ್ರಕರಣ ಸಂಖ್ಯೆ: 18249/2005–06, ದಿನಾಂಕ: 10/20/–05–2016.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ನಿ.441 ರನ್ವಯ ವಸೂಲಾಧಿಕಾರಿ,
ರೆಡ್ಡಿ ಸಹಕಾರ ಬ್ಯಾಂಕ್ ನಿಯಮಿತ, ಬ್ಯಾಂಕ್ ರೋಡ, ಧಾರವಾಡ ಇವರ ನಡವಳಿಕೆಗಳು.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ರ ಕಲಂ 101–ಬಿ ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ, 38 ಎ (5) ರ ಮೇರೆಗೆ ನೀಡಲಾದ, ಮಾರಾಟ ಮಾಡಲಾಗದ ಆಸ್ತಿಯ ವರ್ಗಾವಣೆ ಪ್ರಮಾಣ ಪತ್ರ.

| ಡಿಕ್ರಿ ಹೋಲ್ಡರ್ | ತೀರ್ಪು ಬಾಕಿದಾರರು |
|---|---|
| 1) ರಡ್ಡಿ ಸಹಕಾರ ಬ್ಯಾಂಕ್ ನಿಯಮಿತ, ಬ್ಯಾಂಕ್ ರೋಡ, ಧಾರವಾಡ ವತಿಯಿಂದ ಮುಖ್ಯ ಕಾರ್ಯನಿರ್ವಹಣಾಧಿಕಾರಿ | 1) ಶ್ರೀ ಶಂಕ್ರಪ್ಪ ದೊಡ್ಡಬಸಪ್ಪ ಬಜಂತ್ರಿ ಸಾ: ಹರ್ತಿ, ತಾ: ಗದಗ<br>2) ಶ್ರೀ ಫಕೀರಪ್ಪ ದೊ. ಬಜಂತ್ರಿ ಸಾ: ಹರ್ತಿ, ತಾ: ಗದಗ<br>3) ಶ್ರೀ ವೆಂಕಪ್ಪ ರಾ. ಸೋಮರಡ್ಡಿ ಸಾ: ಹರ್ತಿ, ತಾ: ಗದಗ |

**ವಿಷಯ:** ಜಾಹೀರ ಲಿಲಾವಿನಲ್ಲಿ ಮಾರಾಟವಾಗದೇ ಇದ್ದ ತೀರ್ಪು ಸಾಲಗಾರರ ಸ್ಥಿರಾಸ್ತಿಗಳನ್ನು, ರೆಡ್ಡಿ ಸಹಕಾರ ಬ್ಯಾಂಕ್ ನಿಯಮಿತ, ಧಾರವಾಡ ಇವರ ಹೆಸರಿಗೆ ವರ್ಗಾಯಿಸುವ ಕುರಿತು.

**ಉಲ್ಲೇಖ :** 1) ಈ ಕಛೇರಿಯ ನೋಟೀಸು ಸಮಸಂಖ್ಯೆ ದಿನಾಂಕ: 11–03–2016.

ಮುಖ್ಯ ಕಾರ್ಯನಿರ್ವಹಣಾಧಿಕಾರಿ, ರೆಡ್ಡಿ ಸಹಕಾರ ಬ್ಯಾಂಕ್ ನಿಯಮಿತ, ಧಾರವಾಡ ಇವರು ಮೇಲ್ಕಂಡ ತೀರ್ಪು ಬಾಕಿದಾರರ ವಿರುದ್ಧ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ನಿ.441, ಕರ್ನಾಟಕ ರಾಜ್ಯ ಪಟ್ಟಣ ಸಹಕಾರ ಬ್ಯಾಂಕುಗಳ ಮಹಾಮಂಡಳ ನಿಯಮಿತ, ಬೆಂಗಳೂರು, ಪ್ರಾಂತೀಯ ಕಛೇರಿ, ಹುಬ್ಬಳ್ಳಿ ಇವರ ನ್ಯಾಯಾಲಯದಲ್ಲಿ ಕ.ಸ.ಸ. ಕಾಯ್ದೆ, 1959 ಕಲಂ 70 ರನ್ವಯ ಪಂಚಾಯತ್ ದಾವೆಯನ್ನು ಹೂಡಿ, ದಾವಾ ಸಂಖ್ಯೆ:ಜೆಆರ್‌ಡಿ. ಯುಬಿಎಫ್/362/2013–14 ರಲ್ಲಿ ದಿ:05–08–2013 ರಂದು ತೀರ್ಪು ಪಡೆದು, ಸಾಲ ವಸೂಲಾತಿಗಾಗಿ ಈ ಕಛೇರಿಯಲ್ಲಿ ಅಮಲ್ಜಾರಿ ಪ್ರಕರಣ ಸಂಖ್ಯೆ: 65/2013–14 ಇದನ್ನು ದಾಖಲಿಸಿರುತ್ತಾರೆ.

ತೀರ್ಪು ಬಾಕಿದಾರರಿಂದ ಡಿಕ್ರಿದಾರ ಬ್ಯಾಂಕಿಗೆ ಬರಬೇಕಾದ ಬಾಕಿ ₹. 6,51,080/– ತದನಂತರದ ಅವಧಿಗೆ ಬಡ್ಡಿ + ಸುಸ್ತಿ ಬಡ್ಡಿ ಹಾಗೂ ಇತರೆ ಖರ್ಚುಗಳ ವಸೂಲಾತಿಗಾಗಿ, 1ನೇಯ ತೀರ್ಪು ಸಾಲಗಾರರಿಗೆ ಸೇರಿದ ಈ ಕೆಳಗೆ ನಮೂದಿಸಿರುವ ಸ್ಥಿರಾಸ್ತಿಗಳನ್ನು 1) ದಿ:24–04–2014 2) 26–09–2014 3) 26–02–2015 4) 24–06–2015 ರಂದು ಬಹಿರಂಗ ಹರಾಜು ಮೂಲಕ ಮಾರಾಟ ಮಾಡಲು ನಿಗಧಿಪಡಿಸಲಾಗಿತ್ತು.

ಸದರಿ ಹರಾಜಿನಲ್ಲಿ ಸ್ಥಿರಾಸ್ತಿಗಳನ್ನು ಖರೀದಿಸಲು ಬೇಡಿಕೆದಾರರು ಇಲ್ಲದಿರುವುದರಿಂದ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡಲು ಸಾಧ್ಯವಾಗಿರುವುದಿಲ್ಲ ಎಂದು ಮಾರಾಟಾಧಿಕಾರಿಗಳು ವರದಿ ಸಲ್ಲಿಸಿದ್ದು, ತದನಂತರ ಡಿಕ್ರಿದಾರ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ದಿನಾಂಕ: 09–03–2016 ರ ಪತ್ರದ ಮೂಲಕ ತೀರ್ಪು ಸಾಲಗಾರರ ಆಸ್ತಿಯನ್ನು ಡಿಕ್ರಿದಾರ ಬ್ಯಾಂಕಿಗೆ ವರ್ಗಾವಣೆ ಮಾಡಿಕೊಡಬೇಕೆಂದು ವಿನಂತಿಸಿಕೊಂಡಿರುತ್ತಾರೆ. ಇದರೊಂದಿಗೆ ಬ್ಯಾಂಕಿನ ಆಡಳಿತ ಮಂಡಳಿ ಸಭೆಯ ನಿರ್ಣಯ ಸಂಖ್ಯೆ : 14, ದಿನಾಂಕ: 27–02–2016 ರ ನಡವಳಿಕೆಗಳ ಪ್ರತಿಯನ್ನು ಸಲ್ಲಿಸಿದ್ದಾರೆ, ಇದರಿಂದಾಗಿ ತೀರ್ಪು ಸಾಲಗಾರರು ಡಿಕ್ರಿದಾರ ಬ್ಯಾಂಕಿನ ಸಾಲ ಮರುಪಾವತಿ ಮಾಡಲು ವಿಫಲರಾಗಿರುವುದನ್ನು ಗಮನಿಸಲಾಗಿದೆ.

ಉಲ್ಲೇಖದ ನೋಟಿಸಿನನ್ವಯ ತೀರ್ಪು ಸಾಲಗಾರರಿಗೆ ₹. 6,51,080/– ಮೊತ್ತವನ್ನು ದಿ: 11–03–2016 ರಿಂದ 30 ದಿವಸಗಳೊಳಗಾಗಿ ಈ ಕಛೇರಿಯಲ್ಲಿ ಠೇವಣಿಯಾಗಿ ಇಡಲು ತಿಳಿಸಲಾಗಿತ್ತು, ತೀರ್ಪು ಸಾಲಗಾರರಿಗೆ ನೋಟೀಸುಗಳು ನೋಂದಣಿ ಅಂಚೆ ಮೂಲಕ ಜಾರಿಯಾಗಿದ್ದು, ತೀರ್ಪು ಸಾಲಗಾರರು ಠೇವಣಿಯನ್ನು ಇಡಲು ವಿಫಲರಾಗಿದ್ದಾರೆ.

ಆದ್ದರಿಂದ ಡಿಕ್ರಿದಾರ ಬ್ಯಾಂಕಿಗೆ ಆಧಾರವಾಗಿರುವ ಶೆಡ್ಯೂಲ್ ನಲ್ಲಿ ಕಾಣಿಸಿರುವ, ತೀರ್ಪುಬಾಕಿದಾರರ ಸ್ಥಿರಾಸ್ತಿಗಳನ್ನು ಡಿಕ್ರಿ ಹೋಲ್ಡರ್ ರೆಡ್ಡಿ ಸಹಕಾರ ಬ್ಯಾಂಕ್ ನಿಯಮಿತ, ಧಾರವಾಡ ಇವರ ಹೆಸರಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ರ ಕಲಂ 101–ಬಿ ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960 ರ ನಿಯಮ 38 ಎ (5) ರ ಪ್ರಕಾರ ವರ್ಗಾವಣೆ ಮಾಡಲು ಈ ಮೂಲಕ ಆದೇಶಿಸಲಾಗಿದೆ. ಹಾಗೂ ನಿಯಮ 38 ಎ(5) ರ ಅಡಿಯಲ್ಲಿ ನಮೂನೆ 8 ರಲ್ಲಿ ಕಲಂ 101 ಬಿ ಪ್ರಕರಣದ ಮೇರೆಗೆ ಸ್ಥಿರಾಸ್ತಿಗಳನ್ನು ಖರೀದಿಸಲು ಖರೀದಿದಾರರು ಇಲ್ಲದೇ ಇರುವುದರಿಂದ ಮಾರಾಟ ಮಾಡಲಾಗದ ಆಸ್ತಿಯ ವರ್ಗಾವಣೆ ಪ್ರಮಾಣ ಪತ್ರವನ್ನು ನೀಡಲಾಗಿದೆ.

: ನಮೂನೆ 8 :

ಕಲಂ 101 ಬಿ ಮೇರೆಗೆ ಸ್ವತ್ತು ವರ್ಗಾವಣೆ ಪ್ರಮಾಣ ಪತ್ರ.

ಅ.ಬ. ಪ್ರಕರಣ ಸಂಖ್ಯೆ: 65/2013–14, ದಿನಾಂಕ: 10/20–05–2016.

ಶ್ರೀಮತಿ ರಂಜನಾ ಟಿ. ಪೋಳ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ನಿ.441 ರನ್ವಯ ವಸೂಲಾಧಿಕಾರಿ, ರೆಡ್ಡಿ ಸಹಕಾರ ಬ್ಯಾಂಕ್ ನಿಯಮಿತ, ಧಾರವಾಡ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ರ ಕಲಂ 101–ಬಿ ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960 ರ ನಿಯಮ 38 ಎ (5) ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ವ್ಯಾಜ್ಯ ಸಂಖ್ಯೆ:ಜೆಆರ್‌ಡಿ.ಯುಬಿಎಫ್/362/2013–14 ರಲ್ಲಿ ದಿ: 05–08–2013 ರಂದು ತೀರ್ಪು ಪಡೆದು ಆನಂತರ ಅಮಲ್ಜಾರಿ ಪ್ರಕರಣ ಸಂಖ್ಯೆ:65/2013–14, ರ ಅಡಿಯಲ್ಲಿ ತೀರ್ಪು ಬಾಕಿದಾರರಾದ ತೀರ್ಪು ಸಾಲಗಾರರಿಗೆ ಸೇರಿದ ಹಾಗೂ ಡಿಕ್ರಿದಾರ ಬ್ಯಾಂಕಿಗೆ ಆಧಾರವಾಗಿರುವ ಈ ಕೆಳಗೆ ವಿವರಿಸಿದ ಶೆಡ್ಯೂಲ ಸ್ಥಿರಾಸ್ತಿಗಳನ್ನು ಬಹಿರಂಗ ಹರಾಜಿನಲ್ಲಿ ಖರೀದಿಸುವವರು ಇಲ್ಲದೇ ಮಾರಾಟವಾಗದೇ ಇರುವ ಕಾರಣ, ರೆಡ್ಡಿ ಸಹಕಾರ ಬ್ಯಾಂಕ್ ನಿಯಮಿತ, ಧಾರವಾಡ ಈ ಬ್ಯಾಂಕಿಗೆ ಈ ಕೆಳಗೆ ನಮೂದಿಸಿದ ಶರತ್ತುಗಳು ಮತ್ತು ನಿಯಮಗಳಿಗೆ ಒಳಪಟ್ಟು ವರ್ಗಾವಣೆ ಮಾಡಲಾಗಿದೆ.

**ವರ್ಗಾವಣೆ ಮಾಡಬೇಕೆಂದಿರುವ ಸ್ಥಿರಸ್ವತ್ತುಗಳ ವಿವರ**

| ಜಿಲ್ಲೆ | ತಾಲ್ಲೂಕು | ಹೋಬಳಿ/ಗ್ರಾಮ | ಸರ್ವೆ ನಂ. | ಕ್ಷೇತ್ರ ಎ–ಗುಂ. | ಸ್ಥಿರಾಸ್ತಿ ಮಾಲೀಕರ ಹೆಸರು |
|---|---|---|---|---|---|
| ಗದಗ | ಗದಗ | ಹರ್ತಿ | ವಿಪಿಸಿ ನಂ.252 ಮನೆ | 1032 ಚ.ಅ. | ಶ್ರೀ ಶಂಕ್ರಪ್ಪ ದೊ.ಬಸಪ್ಪ ಕೊರವಾರ ಉರ್ಫ ಬಜಂತ್ರಿ |
| ಗದಗ | ಗದಗ | ಹರ್ತಿ | ರಿ.ಸ. ನಂ.364/2 | 04–07 | ಸದರ |
| ಗದಗ | ಗದಗ | ಹರ್ತಿ | ರಿ.ಸ. ನಂ.349/3ಬ | 03–11 | ಸದರ |

**: ಆಸ್ತಿ ವರ್ಗಾವಣೆಯ ಶರತ್ತುಗಳು :**

1) ತೀರ್ಪು ಬಾಕಿದಾರರು ಡಿಕ್ರಿದಾರ ಬ್ಯಾಂಕಿಗೆ ಸಂದಾಯ ಮಾಡಬೇಕಾದ ಸಾಲದ ಬಾಕಿ ಅಸಲು, ಬಡ್ಡಿ, ಸುಸ್ತಿ ಬಡ್ಡಿ ಮತ್ತು ಇತರೆ ಖರ್ಚುಗಳನ್ನು ಪೂರ್ಣವಾಗಿ ಬ್ಯಾಂಕಿಗೆ ಪಾವತಿಸಿದಲ್ಲಿ, ಬ್ಯಾಂಕು ತನಗೆ ಈ ಮೂಲಕವಾಗಿ ವರ್ಗಾವಣೆ ಮಾಡಲಾದ ಮೇಲ್ಕಂಡ ಸ್ಥಿರಾಸ್ತಿಗಳನ್ನು ತೀರ್ಪು ಬಾಕಿದಾರನಿಗೆ ಬಿಟ್ಟು ಕೊಡತಕ್ಕದ್ದು. ದಿನಾಂಕ: 11–03–2016 ರಂದು ಈ ಕಛೇರಿಯಿಂದ ನೀಡಲಾದ ಸಮಸಂಖ್ಯೆಯ ನೋಟೀಸ್‌ನಲ್ಲಿ ಗದಗ ತಾಲ್ಲೂಕಿನ ಹರ್ತಿ ಗ್ರಾಮದ ವಿಪಿಸಿ ನಂ.252–ಮನೆ–ಕ್ಷೇತ್ರ 1032ಚ.ಅ., ಗದಗ ತಾಲ್ಲೂಕಿನ ಹರ್ತಿ ಗ್ರಾಮದ ರಿ.ಸ. ನಂ.364/2ಬ, ಕ್ಷೇತ್ರ 4ಎ–7ಗುಂ., ಗದಗ ತಾಲ್ಲೂಕಿನ ಹರ್ತಿ ಗ್ರಾಮದ ರಿ.ಸ. ನಂ.349/3ಬ, ಕ್ಷೇತ್ರ 03ಎ–11ಗುಂ. ಇವುಗಳನ್ನು ವರ್ಗಾವಣೆಗಾಗಿ ನೋಟೀಸ್‌ನಲ್ಲಿ ಉಲ್ಲೇಖಿಸಲಾಗಿತ್ತು, ಆದರೆ ತೀರ್ಪು ಸಾಲಗಾರರಿಂದ ₹. 6,51,080/– ಬರಬೇಕಾಗಿದ್ದು, ಗದಗ ತಾಲ್ಲೂಕಿನ ಹರ್ತಿ ಗ್ರಾಮದ ವಿಪಿಸಿ ನಂ.252–ಮನೆ–ಕ್ಷೇತ್ರ 1032 ಚ.ಅ. ಇದರ ಮೌಲ್ಯ ಮಾಪನ ₹. 8,00,000/– ಇದ್ದು. ಈ ಮೊತ್ತ, ಸ್ಥಿರಾಸ್ತಿಯ ವರ್ಗಾವಣೆಯ ಉದ್ದೇಶಕ್ಕಾಗಿ ಸಾಕಾಗುತ್ತಿರುವುದರಿಂದ ಇದನ್ನು ಮಾತ್ರ ವರ್ಗಾವಣೆ ಮಾಡಿ, ಉಳಿದ ಸ್ಥಿರಾಸ್ತಿಗಳಾದ ಗದಗ ತಾಲ್ಲೂಕಿನ ಹರ್ತಿ ಗ್ರಾಮದ ಗದಗ ತಾಲ್ಲೂಕಿನ ಹರ್ತಿ ಗ್ರಾಮದ 1) ರಿ.ಸ. ನಂ.364/2, ಕ್ಷೇತ್ರ 04ಎ–07ಗುಂ., 2) ರಿ.ಸ. ನಂ.349/3ಬ, ಕ್ಷೇತ್ರ 03ಎ–11ಗುಂ. ಇವುಗಳನ್ನು ವರ್ಗಾವಣೆ ಪ್ರಕ್ರಿಯೆಯಿಂದ ಕೈಬಿಡಲಾಗಿದೆ.

2) ತೀರ್ಪು ಸಾಲಗಾರರಿಂದ ದಿ:11–03–2016 ರಂದು ₹.6,51,080/– ಬಾಕಿ ಇದ್ದು, ಅವರಿಗೆ ಸೇರಿದ ಜಮೀನುಗಳ ಬಗ್ಗೆ ಹಿರಿಯ ಉಪನೋಂದಣಾಧಿಕಾರಿಗಳು, ಗದಗ ಇವರಿಂದ ಪ್ರತಿ ಎಕರೆಗೆ ಮಾರುಕಟ್ಟೆಯ ಮಾರ್ಗಸೂಚಿ ಬೆಲೆಗಳನ್ನು ಪಡೆಯಲಾಗಿದ್ದು, ವಿವರಗಳು ಈ ಕೆಳಗಿನಂತಿವೆ.

| ತಾಲ್ಲೂಕು | ಹೋಬಳಿ/ಗ್ರಾಮ | ಸರ್ವೆ ನಂ. | ಕ್ಷೇತ್ರ | ಸ್ಥಿರಾಸ್ತಿಯ ಒಟ್ಟು ಬೆಲೆ |
|---|---|---|---|---|
| ಗದಗ | ಹರ್ತಿ | ವಿಪಿಸಿ ನಂ.252 ಮನೆ | 1032–ಚ.ಅ. | ₹. 8,00,000/– |

3) ವರ್ಗಾಯಿಸಲಾದ ಆಸ್ತಿ ನಿರ್ವಹಣೆ ಮತ್ತು ಮರು ಮಾರಾಟದ ಸಂಬಂಧ, ಬ್ಯಾಂಕು ಸಹಕಾರ ಸಂಘಗಳ ನಿಯಮ 38 ಎ ರ ಅಡಿಯಲ್ಲಿನ ವಿಧಿವಿಧಾನಗಳನ್ನು ಪಾಲಿಸತಕ್ಕದ್ದು.

4) ವರ್ಗಾವಣೆಯಾದ ಆಸ್ತಿಗಳನ್ನು ಬ್ಯಾಂಕು ಮಾರಾಟ ಮಾಡುವ ಪೂರ್ವದಲ್ಲಿ ಈ ಕಛೇರಿಯ ಅನುಮತಿ ಪಡೆಯತಕ್ಕದ್ದು.

5) ತೀರ್ಪು ಬಾಕಿದಾರರು ಸ್ಥಿರಾಸ್ತಿಗಳ ಕಬ್ಜಾವನ್ನು ಕೂಡಲೇ ಜಾರಿಗೆ ಬರುವಂತೆ ಡಿಕ್ರಿದಾರ ಬ್ಯಾಂಕಿಗೆ ವಹಿಸಿ ಕೊಡತಕ್ಕದ್ದು.

ಈ ಆದೇಶವನ್ನು ಮತ್ತು ಪ್ರಮಾಣ ಪತ್ರವನ್ನು ನನ್ನ ಸಹಿ ಹಾಗೂ ಈ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 10/20–05–2016 ರಂದು ಹೊರಡಿಸಲಾಗಿದೆ.

**PR. 546**

**SC. 20**

**ಶ್ರೀಮತಿ ರಂಜನಾ ಟಿ. ಪೋಳ,**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಹಾಗೂ ನಿ.441 ರನ್ವಯ ವಸೂಲಾಧಿಕಾರಿ.

## ಕಂದಾಯ ಇಲಾಖೆ

### ಉಪವಿಭಾಗ ದಂಡಾಧಿಕಾರಿಗಳ ಕಾರ್ಯಾಲಯ, ಬೆಳಗಾವಿ ಉಪವಿಭಾಗ, ಬೆಳಗಾವಿ.

**ವಿಷಯ :** ಸಾಯಿ ಮಲ್ಟಿ ಸರ್ವಿಸಸ್ ಎಂಬ ಸ್ಕೀಂನಲ್ಲಿ ಸಾರ್ವಜನಿಕರಿಗೆ ಮಲ್ಟಿಲೆಬಲ್ ಸ್ಕೀಂ ಮುಖಾಂತರ ಕೋಟ್ಯಾಂತರ ರೂಪಾಯಿಯನ್ನು ಮಾಡಿರುವ ಶ್ರೀ ಸಂಜಯ ಬಸಪ್ಪ ಟೆಂಗಿನಕಾಯಿ ಮತ್ತು ಸಾಯಿ ಮಲ್ಟಿ ಸರ್ವಿಸಸ್‌ಗೆ ಸೇರಿರುವ ಸ್ಥಿರ ಆಸ್ತಿಗಳನ್ನು ವಿಲೆ ಮಾಡಿ ಹೂಡಿಕೆದಾರರಿಗೆ ಹಣ ವಾಪಸ್ಸು ಮಾಡುವ ಬಗ್ಗೆ ಕಲಂ 3, ಕರ್ನಾಟಕ ಹಣಕಾಸು ಸಂಸ್ಥೆಗಳಲ್ಲಿ ಠೇವಣಿದಾರರ ಹಿತಾಸಕ್ತಿ ಸಂರಕ್ಷಣೆ ಅಧಿನಿಯಮ 2004 ರನ್ವಯ ಕ್ರಮ ಕೈಕೊಳ್ಳುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಕ್ರ:ಎಲ್‌ಎಡಬ್ಲ್ಯೂ–67/ಎಲ್‌ಸಿಇ–06, ದಿ : 22–06–2006.
2. ಸರ್ಕಾರದ ಅಧಿಸೂಚನೆ ಕ್ರ:ಆಇ–27/ಟಿಎಆರ್ ದಿನಾಂಕ : 12–12–2007.
3. Hon'ble High Court of Karnataka Circuit Bench At Dharwad order dated : 11-12-2012 in WP No. 67403/2011.
4. Hon'ble High Court of Karnataka Circuit Bench At Gulbarga Order dated : 03-06-2003 in WP No. 100245-246/2013.
5. ಮಾನ್ಯ ಜಿಲ್ಲಾ ಪ್ರಧಾನ ಹಾಗೂ ಸತ್ರ ನ್ಯಾಯಾಧೀಶರು, ಜಿಲ್ಲಾ ಹಾಗೂ ಸತ್ರ ನ್ಯಾಯಾಲಯ, ಬೆಳಗಾವಿ ಇವರ ಮಿಸ್‌ಲೆನಿಯಸ್/175/2013.

**ಪ್ರಸ್ತಾವನೆ :**

ಮೇಲ್ಕಾಣಿಸಿದ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ (1)ರ ಅಧಿಸೂಚನೆಯಡಿ ಮಾನ್ಯ ಘನವೆತ್ತ ಕರ್ನಾಟಕ ಸರ್ಕಾರವು Karnataka Protection of Interest of Depositors in Financial Establishment Act 2004 ರಡಿ ವಿಶೇಷ ನ್ಯಾಯಾಲಯ ರಚಿಸಿ, ಕ್ರಮ ತೆಗೆದುಕೊಳ್ಳಲು ಜಿಲ್ಲಾ ಪ್ರಧಾನ ಹಾಗೂ ಸತ್ರ ನ್ಯಾಯಾಧೀಶರನ್ನು ನಿಯುಕ್ತಿಗೊಳಿಸಿರುತ್ತಾರೆ. ಹಾಗೂ ಉಲ್ಲೇಖ (2)ರ ಸರ್ಕಾರದ ಅಧಿಸೂಚನೆಯಡಿ 2004ರ ಕರ್ನಾಟಕ ಹಣಕಾಸು ಸಂಸ್ಥೆಗಳಲ್ಲಿ ಠೇವಣಿದಾರರ ಹಿತಾಸಕ್ತಿ ಸಂರಕ್ಷಣೆ ಅಧಿನಿಯಮ (2005ರ ಕರ್ನಾಟಕ ಅದಿನಿಯಮ 30) ಭಾಗ 5ರ ಉಪವಿಭಾಗ (1)ರಡಿ ಪ್ರದತ್ತವಾದ ಅಧಿಕಾರದನ್ವಯ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಉದ್ದೇಶಗಳಿಗಾಗಿ ಉಪವಿಭಾಗಗಳ ಸಂಬಂಧಿಸಿದ ಉಪವಿಭಾಗಾಧಿಕಾರಿ ಮತ್ತು ಉಪವಿಭಾಗ ದಂಡಾಧಿಕಾರಿಗಳನ್ನು ಅವರ ಅಧಿಕಾರ ವ್ಯಾಪ್ತಿಯೊಳಗೆ ಬರುವ ಪ್ರದೇಶಗಳಿಗೆ ಸಂಬಂಧಿಸಿದಂತೆ ಸಕ್ಷಮ ಪ್ರಾಧಿಕಾರಗಳನ್ನಾಗಿ ನೇಮಕಾತಿ ಮಾಡಿರುತ್ತಾರೆ.

ಶ್ರೀ ಸಂಜಯ ಬಸಪ್ಪ ಟೆಂಗಿನಕಾಯಿ ಎಂಬುವರು ಬೆಳಗಾವಿ ನಗರದ ಕಪಿಲೇಶ್ವರ ರಸ್ತೆಯಲ್ಲಿರುವ ಮೆ॥ ಸಾಯಿ ಮಲ್ಟಿ ಸರ್ವಿಸಸ್, ಎಂಬ ಸಂಸ್ಥೆಯ ಮೂಲಕ ಹೂಡಿಕೆದಾರರಿಂದ ಹಣ ಪಡೆದು ಮೋಸ ಮಾಡಿದ್ದರ ಕುರಿತಂತೆ, ಸದರಿ ಸಂಸ್ಥೆಯ ವಿರುದ್ಧ ಕ್ರಮ ಜರುಗಿಸುವುದಕ್ಕಾಗಿ ಉಲ್ಲೇಖ (3) ಹಾಗೂ (4)ರಡಿಯ ಆದೇಶಗಳಡಿ ಮಾನ್ಯ ಉಚ್ಚ ನ್ಯಾಯಾಲಯ ಸಂಚಾರಿ ಪೀಠ ಧಾರವಾಡ ಮತ್ತು ಗುಲ್ಬರ್ಗಾ ಇವರು Karnataka Protection of Interest of Depositors in Financial Establishment Act 2004ರ ಪ್ರಕಾರ ಸಂಸ್ಥೆಯ ವಿರುದ್ಧ ದಿನಾಂಕ : 31–07–2013ರೊಳಗಾಗಿ ಸಹಾಯಕ ಆಯುಕ್ತರು ಬೆಳಗಾವಿ ಇವರಿಗೆ ಕ್ರಮ ಜರುಗಿಸಲು ಆದೇಶಿಸಿದ್ದಾರೆ.

ಮಾನ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ಕ್ರಮ ಜರುಗಿಸಲು ಉಲ್ಲೇಖ 5ರಡಿ ಮುಟ್ಟುಗೋಲು ಹಾಕಿ ಹಾಗೂ ಮಾರಾಟ ಮಾಡಲು ಅನುಮತಿ ಕೋರಲಾಗಿದೆ.

ಶ್ರೀ ಸಂಜಯ ಬಸಪ್ಪ ಟೆಂಗಿನಕಾಯಿ ಮತ್ತು ಮೆ॥ ಸಾಯಿ ಮಲ್ಟಿ ಸರ್ವಿಸಸ್ ಇವರು ಹೊಂದಿರುವ ಈ ಕೆಳಗಿನ ಬ್ಯಾಂಕ್ ಖಾತೆ ಹಾಗೂ ಅವರು ಹೊಂದಿರುವ ಸ್ಥಿರಾಸ್ತಿಗಳ ಮಾಹಿತಿಯನ್ನು ಈ ಕಾರ್ಯಾಲಯದಿಂದ ಸಂಗ್ರಹಿಸಿದ್ದು ಅವುಗಳ ವಿವರ ಈ ಕೆಳಗಿನಂತೆ ಇರುತ್ತದೆ.

**ಶ್ರೀ ಸಂಜಯ ಬಸಪ್ಪ ಟೆಂಗಿನಕಾಯಿ ಮತ್ತು ಮೆ॥ ಸಾಯಿ ಮಲ್ಟಿ ಸರ್ವಿಸಿಸ್ ಇವರು ಹೊಂದಿರುವ ಸ್ಥಿರಾಸ್ತಿಗಳ ವಿವರ**

| ಅನಂ | ತಾಲ್ಲೂಕು | ಗ್ರಾಮದ ಹೆಸರು | ರಿಸನಂ | ಕ್ಷೇತ್ರ |
|---|---|---|---|---|
| 1 | ಬೆಳಗಾವಿ | ಸುತಗಟ್ಟಿ | 54/2 | 08–37–00–00 ಪೈಕಿ<br>01–08–00–00 |
| 2 | | ” | 54/3 | 01–30–15–00 |
| 3 | | ” | 54/4 | 01–30–14–13 |
| | | ” | 54/5 | 01–20–03–55 |
| | | ” | 54/6 | 00–03–06–72 |
| 4 | | ಬೆಳಗಾವಿ ನಗರ | ಸಿಟಿಎಸ್ ನಂ 21 | ಅವಿಭಾಜಿತ ವಿಸ್ತೀರ್ಣ 720 ಚ.ಅಡಿ<br>ಅವಿಭಾವಿಜ ವಿಸ್ತೀರ್ಣ 2500 ಚ.ಅಡಿ |
| 5 | | | ಸಿಟಿಎಸ್ ನಂ 20ಎ/2 | ಅವಿಭಾಜಿತ ವಿಸ್ತೀರ್ಣ 640 ಚ.ಅಡಿ |
| 6 | ಖಾನಾಪುರ | ನಿಟ್ಟೂರು | 90ಎ/1 | 08–11–00–00 |
| 7 | | | 90ಎ/2 | 08–11–00–00 |
| 8 | | | 90ಎ/3 | 08–11–00–00 |
| 9 | | | 90ಎ/7 | 08–11–00–00(ಬಿನಶೇತಕಿ) |
| 10 | | | 90ಎ/9 | 03–29–00–00 |
| | | | 90ಎ/4 | 08–11–00–00 |
| | | | 90ಎ/5 | 08–11–00–00 |
| | | | 90ಎ/6 | 08–11–00–00 |
| | | | 90ಎ/8 | 08–11–00–00 |
| | | | 107/ಎ | 00–11–00–00 |
| 11. | | ಉಚವಡೆ | 119/4 | 07–00–00–00 |
| 12. | | | 119/5 | 06–00–00–00 |

**Bank Accounts**

| Sl.No. | Name of the Bank | Account Number |
|---|---|---|
| 1 | Axis Bank Belgaum | 138010200009959 |
| | | 909020036665653 |
| | | 138010100198080 |
| | | 910020044785406 |
| 2 | ING Vysya Bank Belgaum | SB 150010041878 |
| | | SB 150010041727 |
| | | CA 150011009690 |
| | | CA 150011006182 |
| | | CA 150011014114 |
| | | CA 150011006182 |
| | | CA 150011014106 |
| 3 | Karnataka Vikas Grameena Bank, Belgaum | 17007552949(CA-301100) |
| | | 17007552938 (SB-2009) |
| | | 17007569328 |
| | | 89000067633 |
| | | 89000391536 |
| 5 | ICICI Bank Belgaum | 017605003287 |
| | | 017605003294 |
| | | 017605003922 |
| | | 017601522520 |
| | | 6497015520 |
| 6 | Union Bank Belgaum | 96875 |

**Bank Accounts**

| Sl. No | Name of the Bank | Account Number | Amount | Name of A/c Holder |
|---|---|---|---|---|
| 1 | ICICI Bank, Shahapur Branch, Belgaum | 6497101500759 | 26,535/- | Sanjay B Tenginkai |
| 2 | Karnataka Vikas Grameen Bank, Shahapur Branch, Belgaum | 30119 | 2,54,941/- | M/s Sai Associates |
| 3 | Shivam Sahakari Bank Ltd., Ichalkaranji | 201-1224 | 3000/- | Sai Multi Services Sanjay B. Tenginkai |
| 4 | Shivam Sahakari Bank Ltd., Ichalkaranji | 201-1344 | 3000/- | Sai Multi Services Sanjay B. Tenginkai |
| 5 | Shivan Sahakari Bank Ltd., Ichalkaranji | 201-1345 | 5000/- | Shirdi Sai Multi Services Sanjay B. Tenginkai |

**Vehicles**

| Sl.No. | Type of Vehicle | Vehicle Number |
|---|---|---|
| 1 | Toyota Fortuner | KA-22 P-9898 |
| 2 | Ford Fiesta | KA-22 N-5194 |
| 3 | Bolero | KA-22 P-1785 |
| 4 | Benz Car | KA-22 P-8989 |

Karnataka Protection of Interest of Depositors in Financial Establishment Act 2004ರ ಕಲಂ 11 (2)(ಸಿ) ನೇದ್ದರಲ್ಲಿ ಉಲ್ಲೇಖಿಸಿದಂತೆ ಕ್ರಮ ಜರುಗಿಸಲು ಮಾನ್ಯ ಜಿಲ್ಲಾಧಿಕಾರಿಗಳು ಬೆಳಗಾವಿ ಇವರು ತಮ್ಮ ಪತ್ರ ಕ್ರ:ಡಿಸಿ.ಪಿಓಎಲ್.ಸಿಆರ್.618/11-12 ದಿ : 26-06-2013 ರನ್ವಯ

ನಿರ್ದೇಶಿಸಿದನ್ವಯ ಶ್ರೀ ಸಂಜಯ ಬಸಪ್ಪ ಟೆಂಗಿನಕಾಯಿ ಮತ್ತು ಮೆ॥ ಸಾಯಿ ಮಲ್ಟಿ ಸರ್ವಿಸಿಸ್ ಇವರು ಹೊಂದಿರುವ ಈ ಮೇಲೆ ವಿವರಿಸಿದ **ಸ್ಥಿರಾಸ್ತಿಗಳನ್ನು** ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗುತ್ತದೆ. ಕಾರಣ ಇದಕ್ಕೆ ಸಂಬಂಧಿಸಿದಂತೆ ಹಿತಾಸಕ್ತಿಯುಳ್ಳವರಿಗೆ ನಮ್ಮ ಕಛೇರಿಯಿಂದ ನೋಟಿಸ್ ನೀಡಿ 22-04-2016 ರಂದು ವಿಚಾರಣೆಗೆ ಹಾಜರಾಗಿ ತಮ್ಮ ಹೇಳಿಕೆಯನ್ನು ಸಲ್ಲಿಸಲು ತಿಳಿಸಲಾಗಿತ್ತು ಸದರಿ ದಿವಸ ಶ್ರೀ ಶಿವಕುಮಾರ ಈಶ್ವರ ಆವಟಿ ಹಾಗೂ ಶ್ರೀ ಬಸವರಾಜ ಮಡಿವಾಲ್ಲಪ್ಪಾ ದೊಡ್ಡಮನಿ ಇವರ ಪರವಾಗಿ ಟಿ.ಸಿ. ಮೋದಗಿ ವಕೀಲರು ಹಾಜರಾಗಿ ತಮ್ಮ ತಕರಾರನ್ನು ಸಲ್ಲಿಸಿದ್ದು ಅದನ್ನು ಲಭ್ಯವಿದ್ದ ದಾಖಲೆಗಳು ಹಾಗೂ ತನಿಖಾ ವರದಿ ಪ್ರಕಾರ ಪರಿಶೀಲಿಸಲಾಗಿ ಯಾವುದೇ ತರಹದ ಅವರು ಹಕ್ಕು ಸಾಬಿತು ಪಡಿಸಲು ವಿಫಲರಾಗಿದ್ದರಿಂದ ಅವರ ತಕರಾರನ್ನು ತಿರಸ್ಕರಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ ಸಂ. ಎಂಎಜಿ : ಸಿಆರ್-37/2011-12, ಬೆಳಗಾವಿ, ದಿನಾಂಕ : 25-05-2016.**

ನಾನು ಈ ಕೆಳಗೆ ಸಹಿ ಮಾಡುವ ಶ್ರೀಮತಿ ರಾಜಶ್ರೀ ಜೈನಾಪೂರ, ಉಪವಿಭಾಗಾಧಿಕಾರಿ, ಬೆಳಗಾವಿ ಮತ್ತು ಉಪವಿಭಾಗಿಯ ದಂಡಾಧಿಕಾರಿ ಬೆಳಗಾವಿ ಸರ್ಕಾರದ ಅಧಿಸೂಚನೆ ಕ್ರ:ಆಇ/27/ಟಿಎಆರ್ 2007 ದಿನಾಂಕ : 12-12-2007 ರನ್ವಯ ನನಗೆ 2004 ರ ಕರ್ನಾಟಕ ಹಣಕಾಸು ಸಂಸ್ಥೆಗಳಲ್ಲಿ ಠೇವಣಿದಾರರ ಹಣವನ್ನು ಸಂರಕ್ಷಣೆ ಅಧಿನಿಯಮ (2005ರ ಕರ್ನಾಟಕ ಅಧಿನಿಯಮ 30 ಭಾಗ 5ರ ಉಪ ವಿಭಾಗ (1)ರಡಿ ಪ್ರದತ್ತವಾದ ಅಧಿಕಾರದನ್ವಯ ಈ ಮೇಲೆ ವಿವರಿಸಿದ ಶ್ರೀ ಸಂಜಯ ಬಸಪ್ಪ ಟೆಂಗಿನಕಾಯಿ ಮತ್ತು ಮೆ॥ ಸಾಯಿ ಮಲ್ಟಿ ಸರ್ವಿಸಿಸ್ ಇವರು ಹೊಂದಿರುವ ಸ್ಥಿರಾಸ್ತಿಗಳನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗಿದೆ ಎಂದು ಈ ಮೂಲಕ ಆದೇಶಿಸಲಾಗಿದೆ.

**PR - 663**
**SC - 25**

ಸಕ್ಷಮ ಪ್ರಾಧಿಕಾರಿ,
ಹಾಗೂ ಉಪವಿಭಾಗಾಧಿಕಾರಿ,
ಮತ್ತು ಉಪವಿಭಾಗ ದಂಡಾಧಿಕಾರಿ, ಬೆಳಗಾವಿ.

## ಜಿಲ್ಲಾಧಿಕಾರಿಗಳು, ಹಾಗೂ ಜಿಲ್ಲಾದಂಡಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

**ವಿಷಯ :** ಕೆಲಸ ಮಾಡುವ ಸ್ಥಳಗಳಲ್ಲಿ ಮಹಿಳೆಯರ ಮೇಲೆ ನಡೆಯುವ ಲೈಂಗಿಕ ಕಿರುಕುಳ ತಡೆಯಲು ಜಿಲ್ಲಾ ಮಟ್ಟದಲ್ಲಿ ಸ್ಥಳೀಯ ದೂರು ನಿರ್ವಹಣಾ ಸಮಿತಿ ಮತ್ತು ಎಲ್ಲಾ ಕಛೇರಿಗಳಲ್ಲಿ ಅಂತರಿಕ ದೂರು ನಿರ್ವಹಣಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ವೋಚ್ಛ ನ್ಯಾಯಾಲಯದ ರಿಟ್ ಅರ್ಜಿಗಳ ಸಂ:666-70:92ರ ಮೇಲಿನ ದಿನಾಂಕ : 13-04-1997ರ ತೀರ್ಪು.
2. ಸರ್ಕಾರಿ ಆದೇಶ ಸಂ:ಮಮಇ/36/ಮಮಾ/98, ಬೆಂಗಳೂರು ದಿನಾಂಕ : 08-06-2001.
3. ಸರ್ಕಾರದ ಆದೇಶ ಸಂ:ಮಮಇ/58/ಮಮಅ/2002, ಬೆಂಗಳೂರು ದಿನಾಂಕ : 28-08-2002.
4. ಕೆಲಸದ ಸ್ಥಳದಲ್ಲಿ ಮಹಿಳೆಯರ ಮೇಲೆ ಲೈಂಗಿಕ ಕಿರುಕುಳ (ತಡೆಗಟ್ಟುವಿಕೆ, ನಿಷೇಧಿಸುವಿಕೆ, ನಿವಾರಿಸುವಿಕೆ) ಅಧಿನಿಯಮ, 2013.
5. ಅಧ್ಯಕ್ಷರು, ಕ.ರಾ.ಮ.ಆ. ಬೆಂಗಳೂರು ರವರ ಪತ್ರ ಸಂ:ಕರಾಮಾ/ಅ.ಶಾ/ದೂ.ನಿ.ಸ/2015-16/3725, ದಿನಾಂಕ : 15-03-2016.

ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ (1)(2) (3) ಮತ್ತು (4)ರನ್ವಯ ಕೆಲಸ ಮಾಡುವ ಸ್ಥಳಗಳಲ್ಲಿ ಮಹಿಳೆಯರ ಮೇಲೆ ನಡೆಯುವ ಲೈಂಗಿಕ ಕಿರುಕುಗಳಗಳನ್ನು ತಡೆಯಲು ದೂರು ನಿರ್ವಹಣಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಗಳನ್ನು ಹೊರಡಿಸಲಾಗಿತ್ತು. ಕೆಲಸದ ಸ್ಥಳದಲ್ಲಿ ಮಹಿಳೆಯರ ಮೇಲೆ ಲೈಂಗಿಕ ಕಿರುಕುಳ (ತಡೆಗಟ್ಟುವಿಕೆ, ನಿಷೇಧಿಸುವಿಕೆ, ನಿವಾರಿಸುವಿಕೆ) ಅಧಿನಿಯಮ, 2013 ಕೇಂದ್ರ ಸರ್ಕಾರದಿಂದ ಜಾರಿಗೊಳಿಸಲಾಗಿರುತ್ತದೆ. ಈ ಅಧಿನಿಯಮ ಅನ್ವಯ ಖಾಸಗಿ, ಸರ್ಕಾರಿ, ನಿಗಮ ಮಂಡಳಿ, ಸಾರ್ವಜನಿಕ ಉದ್ಯಮಗಳು, ಕಾರ್ಖಾನೆಗಳು ಇತ್ಯಾದಿ ಎಲ್ಲಾ ಕಛೇರಿಗಳಲ್ಲಿ ಆಂತರಿಕ ದೂರು ಸಮಿತಿ ರಚಿಸುವುದು, ಜಿಲ್ಲಾ ಮಟ್ಟದಲ್ಲಿ ಸ್ಥಳೀಯ ದೂರು ಸಮಿತಿ ರಚಿಸುವುದು ಸಹ ಕಡ್ಡಾಯ ಗೊಳಿಸಲಾಗಿರುತ್ತದೆ.

**"ಸ್ಥಳೀಯ ದೂರುಗಳ ಸಮಿತಿ"** ಯ ಸದಸ್ಯರನ್ನು ಜಿಲ್ಲಾಧಿಕಾರಿಗಳು ನಾಮನಿರ್ದೇಶನ ಮಾಡಬೇಕಾಗಿದ್ದು,

**ಈ ಸಮಿತಿಯ ಸ್ವರೂಪ :**

**ಅಧ್ಯಕ್ಷೆ :** ಸಮಾಜ ಕಲ್ಯಾಣ ಕ್ಷೇತ್ರಗಳಲ್ಲಿ, ಸಮರ್ಥರಾದ ಮತ್ತು ಮಹಿಳೆಯರ ಅಭ್ಯುದಯಕ್ಕೆ ಕಾರಣರಾದ ವ್ಯಕ್ತಿಗಳ ಪೈಕಿ ಒಬ್ಬರು ಮಹಿಳೆಯು ಅಧ್ಯಕ್ಷರಾಗಿರಬೇಕು.

**ಒಬ್ಬರು ಸದಸ್ಯರು :** ತಾಲ್ಲೂಕು ಮತ್ತು ಜಿಲ್ಲೆಯಲ್ಲಿನ ನಗರ ಸಭೆ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವವರ ಮಹಿಳೆಯರ ನಡುವೆ ಒಬ್ಬರು ಸದಸ್ಯರಾಗಿರಬೇಕು.

**ಇಬ್ಬರು ಸದಸ್ಯರು :** ಸರ್ಕಾರೇತರ ಸಂಸ್ಥೆಗಳಿಂದ ಅಥವಾ ಮಹಿಳೆಯರ ಅಭ್ಯುದಯಕ್ಕೆ ಕಾರಣರಾದ ಸಂಘಟನೆಗಳನ್ನು ರಚಿಸಿರುವ ಅಥವಾ ಲೈಂಗಿಕ ಕಿರುಕುಳದ ವಿಷಯಕ್ಕೆ ಸಂಬಂಧಿಸಿದಂತೆ ನಿಗಧಿಪಡಿಸಬಹುದಾದ ಜ್ಞಾನ ಹೊಂದಿರುವಂತಹರಾಗಿರಬೇಕು.

ಒಟ್ಟಾರೆ ನಾಮ ನಿರ್ದೇಶನಗೊಂಡವರಲ್ಲಿ ಕನಿಷ್ಠ ಪಕ್ಷ ಒಬ್ಬರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಥವಾ ಇತರೆ ಹಿಂದುಳಿದ ವರ್ಗಗಳ ಅಥವಾ ಕೇಂದ್ರ ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಲ್ಪಡುವ ಅಲ್ಪಸಂಖ್ಯಾತ ಸಮುದಾಯದವರಾಗಿರಬೇಕು.

ಮೇಲ್ಕಂಡ ಅರ್ಹತೆ ಇರುವ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರುಗಳನ್ನಾಗಿ ನೇಮಕ ಮಾಡಲು ಅರ್ಹತೆ ಇರುವವರುಗಳ ಪಟ್ಟಿಯೊಂದಿಗಿನ ಪ್ರಸ್ತಾವನೆಯನ್ನು ಸಲ್ಲಿಸಲು ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಹಾಗೂ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರುಗಳಿಗೆ ಸೂಚಿಸಿದಂತೆ ಸಮಿತಿಗೆ ಅರ್ಹತೆಯುಳ್ಳ ಅಭ್ಯರ್ಥಿಗಳ ಪಟ್ಟಿಯನ್ನು ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ರವರು ಪ್ರಸ್ತಾವನೆಯೊಂದಿಗೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯೊಂದಿಗೆ ಸಲ್ಲಿಸಲಾಗಿರುವ ಪಟ್ಟಿಯಲ್ಲಿನ ಅಭ್ಯರ್ಥಿಗಳು ಸರ್ಕಾರದ ಆದೇಶದಂತೆ ಸ್ಥಳೀಯ ದೂರು ಸಮಿತಿಗೆ ನೇಮಕ ಮಾಡಲು ಅರ್ಹರಾಗಿರುವುದು ಕಂಡುಬಂದಿರುವುದರಿಂದ ಅವರುಗಳನ್ನು ನೇಮಕ ಮಾಡುವ ಬಗ್ಗೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ ಸಂ:ಎಂಎಜೆ(4)ಮಿಸ್/ಸಿಆರ್/243/2015-16, ದಿನಾಂಕ : 18-07-2016.**

ಸರ್ಕಾರದ ಆದೇಶದಂತೆ ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯ ಕೆಲಸದ ಸ್ಥಳಗಳಲ್ಲಿ ಮಹಿಳೆಯರಿಗೆ ಲೈಂಗಿಕ ಕಿರುಕುಳ (ತಡೆಗಟ್ಟುವಿಕೆ, ನಿಷೇಧಿಸುವಿಕೆ, ನಿವಾರಿಸುವಿಕೆ) 2013ರ ಅಧಿನಿಯಮದಡಿಯಲ್ಲಿ ಜಿಲ್ಲಾ ಮಟ್ಟದ ಸ್ಥಳೀಯ ದೂರು ಸಮಿತಿಗೆ ಈ ಕೆಳಕಂಡಂತೆ ಅಧ್ಯಕ್ಷೆ ಹಾಗೂ ಸದಸ್ಯರುಗಳನ್ನು ನೇಮಕ ಮಾಡಿ ಆದೇಶಿಸಿದೆ. ಸರ್ಕಾರದ ಆದೇಶದಂತೆ ಸಮಿತಿಯ ಅವಧಿಯು ಈ ಆದೇಶದ ದಿನಾಂಕದಿಂದ 3 ವರ್ಷದವರೆಗೆ ಚಾಲನೆಯಲ್ಲಿರುತ್ತದೆ.

| ಕ್ರ.ಸಂ. | ಹೆಸರು ಮತ್ತು ಹುದ್ದೆ | ಕಾರ್ಯನಿರ್ವಹಿಸುತ್ತಿರುವ ಸ್ಥಳ | ವಿಶೇಷ ಅರ್ಹತೆ |
|---|---|---|---|
| 1 | ಶ್ರೀಮತಿ ಸಂತೋಷ ವಾಸ್, ಅಧ್ಯಕ್ಷರು, ಜನೋದಯ ಸಂಸ್ಥೆ, ಬೆಂಗಳೂರು | ಜಯಮಹಲ್, ಬೆಂಗಳೂರು | ಬೆಂಗಳೂರು ನಗರ ಜಿಲ್ಲೆಯಲ್ಲಿ ಜನೋದಯ ಸಂಸ್ಥೆಯನ್ನು ಸ್ಥಾಪಿಸಿ ಮಹಿಳೆಯರ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದು, ಜನೋದಯ ಸಂಸ್ಥೆಯ ವತಿಯಿಂದ 03 ಸಾಂತ್ವಾನ ಮಹಿಳಾ ಸಹಾಯವಾಣಿ ಗಳನ್ನು ನಡೆಸುತ್ತಿದ್ದು, ಸಾವಿರಾರು ಮಹಿಳೆಯರ ಅಭಿವೃದ್ಧಿಗೆ ಶ್ರಮಿಸಿರುತ್ತಾರೆ. ಇವರ ವ್ಯಯಕ್ತಿಕ ವಿವರಗಳನ್ನೊಳಗೊಂಡ ಪ್ರಸ್ತಾವನೆಯನ್ನು ಈ ಪತ್ರದೊಂದಿಗೆ ಲಗತ್ತಿಸಿದೆ. |
| 2 | ಶ್ರೀಮತಿ ಸಾಜಿದಾ ಬೇಗಂ, ಅಧ್ಯಕ್ಷರು, ತನ್ಜಿಮ್ ಉಲ್-ಮೊಸಿಂತಾ ಟ್ರಸ್ಟ್, ಬೆಂಗಳೂರು | ಫ್ರೆಜರ್ ಟೌನ್ ಬೆಂಗಳೂರು | ಶ್ರೀಮತಿ ಸಾಜಿದಾ ಬೇಗಂ ಇರುವ ಸಮಾಜ ಸೇವಾ ಕಾರ್ಯಕರ್ತೆಯಾಗಿ ಗುರುತಿಸಿಕೊಂಡಿದ್ದು, ಅಲ್ಪಸಂಖ್ಯಾತ ಸಮುದಾಯದವರಾಗಿದ್ದರೂ ಸಹ ಮಹಿಳೆಯ ಅಭಿವೃದ್ಧಿಗಾಗಿ ಅನೇಕ ಕಾರ್ಯಕ್ರಮಗಳನ್ನು ಸಂಸ್ಥೆಯ ಮೂಲಕ ನಡೆಸುತ್ತಿದ್ದಾರೆ. ಇಲಾಖೆಯಡಿ ಸಾಂತ್ವನ ಮಹಿಳಾ ಸಹಾಯವಾಣಿಯನ್ನು ಸಹ ನಡೆಸುತ್ತಿದ್ದು, ಮಹಿಳೆಯರ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದರೆ, ಇವರ ಸಮಾಜ ಸೇವೆಯನ್ನು ಗುರುತಿಸಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖಾ ವತಿಯಿಂದ 2014-15ನೇ ಸಾಲಿನಲ್ಲಿ ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿಯನ್ನು ನೀಡಲಾಗಿದೆ. ಇವರ ವೈಯಕ್ತಿಕ ವಿವರಗಳನ್ನೊಳಗೊಂಡ ಪ್ರಸ್ತಾವನೆಯನ್ನು ಈ ಪತ್ರದೊಂದಿಗೆ ಲಗತ್ತಿಸಿದೆ. |
| 3 | ಶ್ರೀಮತಿ ಜಯದೇವಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಆನೇಕಲ್ | ಆನೇಕಲ್ | ಮಹಿಳಾ ಮಕ್ಕಳ ಅಭಿವೃದ್ಧಿ ಇಲಾಖೆಯಡಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಾಗಿ ಆನೇಕಲ್‌ನಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. |

**PR - 664**

ಜಿಲ್ಲಾಧಿಕಾರಿಗಳು
ಹಾಗೂ ಜಿಲ್ಲಾದಂಡಾಧಿಕಾರಿಗಳು
ಬೆಂಗಳೂರು ಜಿಲ್ಲೆ, ಬೆಂಗಳೂರು

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ :ನಅಇ 184 ಮೈಅಪ್ರಾ 2016, ಬೆಂಗಳೂರು, ದಿನಾಂಕ: 15.07.2016.**

ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ/355/ಟಿಟಿಪಿ/96, ದಿನಾಂಕ: 02.09.1996 ರನ್ವಯ ಘೋಷಿಸಲಾಗಿರುವ ಹುಣಸೂರು ಸ್ಥಳೀಯ ಯೋಜನಾ ಪ್ರದೇಶಕ್ಕೆ ಕರ್ನಾಟಕ ನಗರ ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 4(ಎ)(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಕರ್ನಾಟಕ ಸರ್ಕಾರವು ದಿನಾಂಕ: 15.07.2016 ರಿಂದ ಜಾರಿಗೆ ಬರುವಂತೆ ಹೆಚ್ಚುವರಿಯಾಗಿ 07 ಗ್ರಾಮಗಳನ್ನು ಸೇರಿಸಿ ಒಟ್ಟು 12 ಗ್ರಾಮಗಳನ್ನು ಒಳಗೊಂಡ ಹಾಲಿ ಸ್ಥಳೀಯ ಯೋಜನಾ ಪ್ರದೇಶವನ್ನು ವಿಸ್ತರಿಸಲಾಗಿದೆ. ಈಗ ಪ್ರಸ್ತುತ ಹೊಸದಾಗಿ ಸೇರ್ಪಡೆಯಾಗಿರುವ ಗ್ರಾಮಗಳು ಹಾಗೂ ಹಾಲಿ ಇದ್ದ 05 ಗ್ರಾಮಗಳನ್ನು ಒಳಗೊಂಡ ಸ್ಥಳೀಯ ಯೋಜನಾ ಪ್ರದೇಶದ ವಿವರಗಳನ್ನು ಅನುಬಂಧ-1 ರಲ್ಲಿ ಹಾಗೂ ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಣೆಗಳನ್ನು ಅನುಬಂಧ-2ರಲ್ಲಿ ನಮೂದಿಸಲಾಗಿದೆ.

ಸದರಿ ವಿಸ್ತರಿತ ಸ್ಥಳೀಯ ಯೋಜನಾ ಪ್ರದೇಶವನ್ನು ವ್ಯವಸಾಯ ವಲಯವೆಂದು ಪರಿಗಣಿಸಲು ಹಾಗೂ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 4(ಎ)(4) ರಲ್ಲಿನ ಅವಕಾಶದನ್ವಯ ವಿಸ್ತರಿತ ಪ್ರದೇಶದಲ್ಲಿ ಸಕ್ಷಮ ಪ್ರಾಧಿಕಾರಿಗಳಿಂದ ಈಗಾಗಲೇ ಅನುಮೋದನೆ ನೀಡಿರುವ ಪ್ರಕರಣಗಳನ್ನು ಸಂರಕ್ಷಿಸಿ ಚಾಲ್ತಿಯಲ್ಲಿರುವ ವಲಯ ನಿಯಮಾವಳಿಗಳನ್ನು ಮಹಾಯೋಜನೆಯನ್ನು ಪರಿಷ್ಕರಿಸಿ ಅನುಮೋದನೆ ಪಡೆಯುವವರೆಗೂ ಅಳವಡಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಾಗರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಅನುಬಂಧ–ಎ**

**ಉದ್ದೇಶಿತ ಹುಣಸೂರು ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿನ ಗ್ರಾಮಗಳು, ಸರ್ವೆ ನಂಬರ್ ಮತ್ತು ವಿಸ್ತೀರ್ಣದ ವಿವರ**

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ಸರ್ವೆ ನಂಬರ್ | ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) | ಷರಾ |
|---|---|---|---|---|
| 1 | ದೊಡ್ಡ ಹುಣಸೂರು | ಪೂರ್ಣ ಕಂದಾಯ ಗ್ರಾಮ | 530.28 | ಪೂರ್ಣ ಗ್ರಾಮ |
| 2 | ಚಿಕ್ಕ ಹುಣಸೂರು | ಪೂರ್ಣ ಕಂದಾಯ ಗ್ರಾಮ | 412.83 | ಪೂರ್ಣ ಗ್ರಾಮ |
| 3 | ಮೂಕನಹಳ್ಳಿ | ಪೂರ್ಣ ಕಂದಾಯ ಗ್ರಾಮ | 401.88 | ಪೂರ್ಣ ಗ್ರಾಮ |
| 4 | ನಿಲುವಾಗಿಲು | ಪೂರ್ಣ ಕಂದಾಯ ಗ್ರಾಮ | 428.73 | ಪೂರ್ಣ ಗ್ರಾಮ |
| 5 | ಕಲ್ಲುಣಿಕೆ | ಪೂರ್ಣ ಕಂದಾಯ ಗ್ರಾಮ | 148.54 | ಪೂರ್ಣ ಗ್ರಾಮ |
| 6 | ಕಿರಜಾಜಿ | ಪೂರ್ಣ ಕಂದಾಯ ಗ್ರಾಮ | 568.95 | ಪೂರ್ಣ ಗ್ರಾಮ |
| 7 | ಬಿಜಗಾನಹಳ್ಳಿ | ಪೂರ್ಣ ಕಂದಾಯ ಗ್ರಾಮ | 465.04 | ಪೂರ್ಣ ಗ್ರಾಮ |
| 8 | ಗೋವಿಂದನಹಳ್ಳಿ | ಪೂರ್ಣ ಕಂದಾಯ ಗ್ರಾಮ | 174.25 | ಪೂರ್ಣ ಗ್ರಾಮ |
| 9 | ಗೋವಿಂದನಹಳ್ಳಿನಾಲಾ | ಪೂರ್ಣ ಕಂದಾಯ ಗ್ರಾಮ | 61.78 | ಪೂರ್ಣ ಗ್ರಾಮ |
| 10 | ರಾಮೇನಹಳ್ಳಿ | ಪೂರ್ಣ ಕಂದಾಯ ಗ್ರಾಮ | 164.77 | ಪೂರ್ಣ ಗ್ರಾಮ |
| 11 | ನಿಲುವಾಗಿಲು ಕಾವಲ್ | ಪೂರ್ಣ ಕಂದಾಯ ಗ್ರಾಮ | 123.18 | ಪೂರ್ಣ ಗ್ರಾಮ |
| 12 | ಬೆಳತೂರು | ಸ.ನಂ.15,16,17,18,19,20ಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಸರ್ವೆ ನಂಬರ್‌ಗಳು ಸೇರಿರುತ್ತವೆ. | 292.85 | ಭಾಗಶಃ ಗ್ರಾಮ |
| **ಒಟ್ಟು** | | | **3773.08** | |

**ನಾಗರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಅನುಬಂಧ–ಬಿ**

ಹುಣಸೂರು ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯು ಬಿಜಗಾನಹಳ್ಳಿ ಗ್ರಾಮದ ಈಶಾನ್ಯ ಸ.ನಂ.31ರ ಮೂಲೆ ಹಾಗೂ ಬಂಟ್ವಾಳ–ಮೈಸೂರು ರಾಷ್ಟ್ರೀಯ ಹೆದ್ದಾರಿ ಸಂಧಿಸುವ ಮೂಲೆಯಿಂದ ಪ್ರಾರಂಭಗೊಂಡು ಬಿಜಗಾನಹಳ್ಳಿ ಗ್ರಾಮದ ಸ.ನಂ. 31,32,35,37,38,39,40,41,42,43,45,51,52,53 ಹಾಗೂ ಸ.ನಂ.54ರ ಪೂರ್ವ ಗಡಿಯಲ್ಲಿ ದಕ್ಷಿಣಾಭಿಮುಖವಾಗಿ ಮುಂದುವರೆದು ಸ.ನಂ. 54ರ ಆಗ್ನೇಯ ಮೂಲೆಯನ್ನು ತಲುಪುತ್ತದೆ. ನಂತರ ಮುಂದುವರೆದು ಬಿಜಗಾನಹಳ್ಳಿ ಗ್ರಾಮದ ಸ.ನಂ. 59,75,76,77ರ ದಕ್ಷಿಣ ಗಡಿಯ ಮುಖಾಂತರ ಪಶ್ಚಿಮಾಭಿಮುಖವಾಗಿ ಚಲಿಸಿ ಸ.ನಂ.79ರ ನೈರುತ್ಯ ಮೂಲೆಯನ್ನು ತಲುಪುತ್ತದೆ. ನಂತರ ಮುಂದುವರೆದು ಸ.ನಂ. 80,81,105ರ ದಕ್ಷಿಣ ಗಡಿಯ ಮೂಲಕ ಪಶ್ಚಿಮಾಭಿಮುಖವಾಗಿ ಮುಂದುವರೆದು ದೊಡ್ಡಹುಣಸೂರು ಮತ್ತು ಬಿಜಗಾನಹಳ್ಳಿ ಗ್ರಾಮದ ಗಡಿಗಳು ಸಂಧಿಸುವ ಬಿಂದುವಿಗೆ ಬಂದು ಸೇರುತ್ತದೆ. ನಂತರ ದಕ್ಷಿಣಾಭಿಮುಖವಾಗಿ ದೊಡ್ಡಹುಣಸೂರು ಗ್ರಾಮದ ಪೂರ್ವಗಡಿಯಲ್ಲಿ ಮುಂದುವರೆದು ಸ.ನಂ. 196ರ ಆಗ್ನೇಯ ಮೂಲೆಗೆ ಬಂದು ಸೇರುತ್ತದೆ. ನಂತರ ಪಶ್ಚಿಮಾಭಿಮುಖವಾಗಿ ಚಲಿಸಿ ಸ.ನಂ. 276, 298, 300, 302, 308ರ ದಕ್ಷಿಣ ಗಡಿಯಲ್ಲಿ ಮುಂದುವರೆದು ಸ.ನಂ. 196ರ ನೈರುತ್ಯ ಮೂಲೆಗೆ ಬಂದು ಸೇರುತ್ತದೆ. ಮುಂದುವರೆದು ಸ.ನಂ. 198ರ ಪೂರ್ವಗಡಿಯಲ್ಲಿ ದಕ್ಷಿಣಾಭಿಮುಖವಾಗಿ ಮುಂದುವರೆದು ಸ.ನಂ 198ರ ದಕ್ಷಿಣ ಗಡಿ ಮುಖಾಂತರ ಚಲಿಸಿ ಸ.ನಂ. 199ರ ಆಗ್ನೇಯ ಮೂಲೆ ಮತ್ತು ಬಲ್ಲೇನಹಳ್ಳಿಗೆ ಹೋಗುವ ರಸ್ತೆಗೆ ಬಂದು ತಲುಪುತ್ತದೆ. ನಂತರ ಪಶ್ಚಿಮಾಭಿಮುಖವಾಗಿ ಸ.ನಂ. 199ರ ದಕ್ಷಿಣ ಗಡಿಯ ಮುಖಾಂತರ ಚಲಿಸಿ ಹಾಗೂ ಸ.ನಂ. 293, 294ರ ಪೂರ್ವ ಹಾಗೂ ಸ.ನಂ.295 ಪಶ್ಚಿಮದ ಗಡಿಗಳಲ್ಲಿ ಚಲಿಸಿ ಹೆಚ್.ಡಿ.ಕೋಟೆ–ಹುಣಸೂರು ಜಿಲ್ಲಾ ಮುಖ್ಯ ರಸ್ತೆ ಹಾಗೂ ಗೋವಿಂದನಹಳ್ಳಿ ಗ್ರಾಮ ಗಡಿಯ ಆಗ್ನೇಯ ಮೂಲೆಗೆ ಬಂದು ತಲುಪುತ್ತದೆ. ನಂತರ ಪಶ್ಚಿಮಾಭಿಮುಖವಾಗಿ ಮುಂದುವರೆದು ಗೋವಿಂದನಹಳ್ಳಿ ಗ್ರಾಮದ ಸ.ನಂ. 21,43,22,24,25,26,28,29,30,33,34,55 ಮತ್ತು ಸ.ನಂ. 53ರ ದಕ್ಷಿಣ ಗಡಿಯಲ್ಲಿ ಸಾಗಿ ಲಕ್ಷ್ಮಣತೀರ್ಥ ನದಿಯನ್ನು ದಾಟಿ ನದಿಯ ಪಶ್ಚಿಮ ಗಡಿಯ ಮೂಲಕ ಉತ್ತರಕ್ಕೆ ಮುಂದುವರೆದು ರಾಮೇನಹಳ್ಳಿ ಗ್ರಾಮದ ಸ.ನಂ. 26ರ ನೈರುತ್ಯ ಮೂಲೆ ಸೇರುತ್ತದೆ. ನಂತರ ಮುಂದುವರೆದು ಸ.ನಂ. 26,27,37,38,39 ಮತ್ತು 43ರ ಬಳಿ ಇರುವ ಚನ್ನಸೋಗೆ ರಸ್ತೆಯನ್ನು ದಾಟಿ ಸ.ನಂ. 41, 40ರ ದಕ್ಷಿಣದ ಗಡಿ ಹಾದು 46 (ಕೆರೆ)ರ ಪಶ್ಚಿಮ ಗಡಿಯಲ್ಲಿ ಉತ್ತರಾಭಿಮುಖವಾಗಿ ಮುಂದುವರೆದು ರಾಮೇನಹಳ್ಳಿ ಮತ್ತು ನಿಲುವಾಗಿಲು ಗ್ರಾಮದ ಗಡಿಗಳು ಸಂಧಿಸುವ ಬಿಂದುವನ್ನು ಸೇರುತ್ತದೆ. ನಂತರ ಮುಂದುವರೆದು ನೀಲುವಾಗಿಲು ಗ್ರಾಮದ ಸ.ನಂ. 68,69,70ರ ಪಶ್ಚಿಮ–ಉತ್ತರದ ಗಡಿಯಲ್ಲಿ ಚಲಿಸಿ ಬಂಟ್ವಾಳ–ಮೈಸೂರು ರಾಷ್ಟ್ರೀಯ ಹೆದ್ದಾರಿಗೆ ಬಂದು ತಲುಪುತ್ತದೆ. ನಂತರ ರಾಷ್ಟ್ರೀಯ ಹೆದ್ದಾರಿ ದಾಟಿ ನಿಲುವಾಗಿಲು ಕಾವಲ್ ಗ್ರಾಮದ ಸ.ನಂ. 35, 38ರ ಪಶ್ಚಿಮ ಗಡಿಯ ಮೂಲಕ ಉತ್ತರಕ್ಕೆ ಸಾಗಿ ಸ.ನಂ. 40. 46ರ ಉತ್ತರದ ಗಡಿ ಮೂಲಕ ಹಾದು ಸ.ನಂ. 46ರ ಈಶಾನ್ಯ ಮೂಲೆ ಸೇರುತ್ತದೆ. ನಂತರ ಉತ್ತರಾಭಿಮುಖವಾಗಿ ಮುಂದುವರೆದು, ಕಲ್ಲುಣಿಕೆ ಗ್ರಾಮದ ಸ.ನಂ. 157ರ ಪಶ್ಚಿಮ ಗಡಿ ಮೂಲಕ ಉತ್ತರಕ್ಕೆ ಸಾಗಿ ಸ.ನಂ. 158, 159, 160ರ ಉತ್ತರದ ಗಡಿಯಲ್ಲಿ ಪೂರ್ವಾಭಿಮುಖವಾಗಿ ಮುಂದುವರೆದು ಬೆಳತೂರು ಗ್ರಾಮದ ಸ.ನಂ. 102ರ ನೈರುತ್ಯ ಮೂಲೆಗೆ ಸೇರುತ್ತದೆ. ಮುಂದುವರೆದು, ಬೆಳತೂರು ಗ್ರಾಮದ ಸ.ನಂ. 102, 103, 101, 108, 111, 113ರ ಪಶ್ಚಿಮ ಗಡಿ ಮೂಲಕ ಉತ್ತರಾಭಿಮುಖವಾಗಿ ಮುಂದುವರೆದು, ಸ.ನಂ.113ರ ವಾಯವ್ಯ ಮೂಲೆ ತಲುಪುತ್ತದೆ. ನಂತರ ಪೂರ್ವಾಭಿಮುಖವಾಗಿ ಮುಂದುವರೆದು ಸ.ನಂ. 114, 116, 117ರ ಉತ್ತರ ಗಡಿಯಲ್ಲಿ ಚಲಿಸಿ ಸ.ನಂ. 118ರ ನೈರುತ್ಯ ಮೂಲೆ ಸೇರಿ ನಂತರ ಮುಂದುವರೆದು ಸ.ನಂ.118,120,121,122ರ ಪಶ್ಚಿಮ ಗಡಿಯಲ್ಲಿ ಮುಂದುವರೆದು ಸ.ನಂ. 122ರ ವಾಯುವ್ಯ ಮೂಲೆಗೆ ತಲುಪುತ್ತದೆ. ನಂತರ ಪೂರ್ವಾಭಿಮುಖವಾಗಿ

ಮುಂದುವರೆದು, ಸ.ನಂ. 122, 123,124, 125ರ ಉತ್ತರ ಗಡಿಯಲ್ಲಿ ಸಾಗಿ ಸ.ನಂ. 125ರ ಈಶಾನ್ಯ ಮೂಲೆ ತಲುಪುತ್ತದೆ. ಮುಂದುವರೆದು ಸ.ನಂ.2,3,4,5,6ರ ಪಶ್ಚಿಮ ಗಡಿಯಲ್ಲಿ ಉತ್ತರಾಭಿಮುಖವಾಗಿ ಚಲಿಸಿ ಸ.ನಂ. 6ರ ವಾಯವ್ಯ ಮೂಲೆ ಸೇರುತ್ತದೆ. ನಂತರ ಪೂರ್ವಾಭಿಮುಖವಾಗಿ ಮುಂದುವರೆದು ಸ.ಂ. 6,7,8,10,14ರ ಉತ್ತರ ಗಡಿಯಲ್ಲಿ ಚಲಿಸಿ ಸ.ನಂ. 14ರ ಆಗ್ನೇಯ ಮೂಲೆ ಸೇರಿ ಪಶ್ಚಿಮಾಭಿಮುಖವಾಗಿ ಮುಂದುವರೆದು ಸ.ನಂ. 14ರ ದಕ್ಷಿಣ ಗಡಿಯಲ್ಲಿ ಸಾಗಿ ಸ.ನಂ. 11ರ ಈಶಾನ್ಯ ಮೂಲೆ ಸೇರುತ್ತದೆ. ನಂತರ ದಕ್ಷಿಣಾಭಿಮುಖವಾಗಿ ಚಲಿಸಿ ಸ.ನಂ. 11ರ ಆಗ್ನೇಯ ಮೂಲೆ ತಲುಪಿ ನಂತರ ಪೂರ್ವಕ್ಕೆ ಚಲಿಸಿ ಸ.ನಂ. 12, 13, 32, 31ರ ಉತ್ತರ ಗಡಿಯಲ್ಲಿ ಮುಂದುವರೆದು ಸ.ನಂ. 30ರ ನೈರುತ್ಯ ಮೂಲೆ ತಲುಪಿ ಉತ್ತರಾಭಿಮುಖವಾಗಿ ಸಾಗಿ ಹುಣಸೂರು ಕೆ.ಆರ್.ನಗರ ಜಿಲ್ಲಾ ಮುಖ್ಯ ರಸ್ತೆ ದಾಟಿಕೊಂಡು ಸ.ನಂ.28,27,23,22,21ರ ಉತ್ತರ ಭಾಗದ ಲಕ್ಷ್ಮಣತೀರ್ಥ ನದಿಗೆ ಬಂದು ಸೇರುತ್ತದೆ. ನಂತರ ಪೂರ್ವಾಭಿಮುಖವಾಗಿ ಮುಂದುವರೆದು ಲಕ್ಷ್ಮಣತೀರ್ಥ ನದಿಯ ಹಾಗೂ ಕಿರಜಾಜಿ ಗ್ರಾಮದ ಉತ್ತರ ಮತ್ತು ಪೂರ್ವ ಗಡಿಯಲ್ಲಿ ಸಾಗಿ ಲಕ್ಷ್ಮಣತೀರ್ಥ ನದಿಯನ್ನು ದಾಟಿಕೊಂಡು ಮೂಕನಹಳ್ಳಿ ಗ್ರಾಮದ ಸ.ನಂ. 173ರ ಉತ್ತರದ ಗಡಿ ಬಂದು ತಲುಪುತ್ತದೆ. ನಂತರ ಸ.ನಂ. 174, 32, 31, 30ರ ಉತ್ತರ ಗಡಿಯಲ್ಲಿ ಪೂರ್ವಾಭಿಮುಖವಾಗಿ ಚಲಿಸಿ ಸ.ನಂ. 30ರ ಈಶಾನ್ಯ ಮೂಲೆ ಸೇರುತ್ತದೆ. ನಂತರ ದಕ್ಷಿಣಾಭಿಮುಖವಾಗಿ ಚಲಿಸಿ ಸ.ನಂ. 30, 28, 27, 26, 25ರ ಪೂರ್ವಗಡಿಯಲ್ಲಿ ಸಾಗಿ ಸ.ನಂ. 24ರ ಈಶಾನ್ಯ ರಸ್ತೆ ಮೂಲೆ ಸೇರುತ್ತದೆ. ನಂತರ ಪೂರ್ವಾಭಿಮುಖವಾಗಿ ಮುಂದುವರೆದು ಸ.ನಂ. 10,9,7ರ ಉತ್ತರ ಗಡಿಯಲ್ಲಿ ಸಾಗಿ ಸ.ನಂ. 7ರ ಈಶಾನ್ಯ ಮೂಲೆ ತಲುಪುತ್ತದೆ. ನಂತರ ದಕ್ಷಿಣಾಭಿಮುಖವಾಗಿ ಮುಂದುವರೆದು ಸ.ನಂ. 7,6,4ರ ಹಾಗೂ ಬೀಜಗಾನಹಳ್ಳಿ ಗ್ರಾಮದ ಸ.ನಂ. 26, 27, 28ರ ಪೂರ್ವಗಡಿಯಲ್ಲಿ ಚಲಿಸಿ ಬಂಟ್ವಾಳ್– ಮೈಸೂರು ರಾಷ್ಟ್ರೀಯ ಹೆದ್ದಾರಿ ಹಾಗೂ ಬೀಜಗಾನಹಳ್ಳಿ ಗ್ರಾಮದ ಸ.ನಂ. 31ರ ಪ್ರಾರಂಭವಾದ ಬಿಂದುವಿನಲ್ಲಿ ಕೊನೆಗೊಳ್ಳುತ್ತದೆ.

P.R.636
SC.50

**ನಾಗರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಗ್ರಾಅಪ 190 ಕೆಎಸ್‌ಎಸ್ 2015, ಬೆಂಗಳೂರು, ದಿನಾಂಕ: 22–06–2016.**

ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 110 ಕೆಎಸ್‌ಎಸ್ 2015, ದಿನಾಂಕ: 05–12–2015ರಲ್ಲಿ ಸಹಾಯಕ ನಿರ್ದೇಶಕರು (ಗ್ರಾಮೀಣ ಉದ್ಯೋಗ) ವೃಂದದಲ್ಲಿ ದಿನಾಂಕ: 31–03–2015ರಲ್ಲಿ ಇದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಟಿ. ಮುರಡಯ್ಯ, ಸಹಾಯಕ ನಿರ್ದೇಶಕರು (ಗ್ರಾಮೀಣ ಉದ್ಯೋಗ) ಇವರ ಜೇಷ್ಠತಾ ಕ್ರಮ ಸಂಖ್ಯೆ 77 ಕ್ಕೆ ಕ್ರಮ ಸಂಖ್ಯೆ "41ಎ" ಎಂದು ತಾತ್ಕಾಲಿಕವಾಗಿ ಪ್ರಕಟಿಸಲಾಗಿದೆ.

ಸಹಾಯಕ ನಿರ್ದೇಶಕರು (ಗ್ರಾಮೀಣ ಉದ್ಯೋಗ) ವೃಂದದಲ್ಲಿ ದಿನಾಂಕ: 31–03–2015 ರಲ್ಲಿ ಇದ್ದಂತೆ ಈ ಕರಡು ಜೇಷ್ಠತೆಯನ್ನು ಪ್ರಕಟಿಸಲಾಗಿದೆ. ತಾತ್ಕಾಲಿಕ ಜೇಷ್ಠತೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖಾ ವೆಬ್‌ಸೈಟ್‌ನಲ್ಲಿ ಎಲ್ಲರ ಗಮನಕ್ಕಾಗಿ ಪ್ರಕಟಿಸಲಾಗಿದೆ. ಸದರಿ ಜೇಷ್ಠತಾ ಪಟ್ಟಿ ಬಗ್ಗೆ ಸಲಹೆ/ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ, ಸಂಬಂಧಪಟ್ಟ ಅಧಿಕಾರಿಗಳು ಲಿಖಿತ ಮೂಲಕ ಈ ಅಧಿಸೂಚನೆಯಲ್ಲಿ ಪ್ರಕಟಿಸಲಾದ ದಿನಾಂಕದಿಂದ 15 ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು. ಸದರಿ ಕಾಲಮಿತಿಯೊಳಗೆ ಸ್ವೀಕರಿಸುವ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದು.

ಈ ಅಧಿಸೂಚನೆಯು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಪ್ರಸ್ತುತ ಬಾಕಿ ಇರುವ ಅರ್ಜಿ ಸಂಖ್ಯೆ: 6801–5/2011 ಮತ್ತು ಮಾನ್ಯ ಉಚ್ಚ ನ್ಯಾಯಾಲಯದ ಧಾರವಾಡ ಪೀಠದಲ್ಲಿ ದಾಖಲಿಸಿರುವ ರಿಟ್ ಅರ್ಜಿ ಸಂಖ್ಯೆ: 103129–103515/2014 ಹಾಗೂ ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ: 2123–2168/2014 ಹಾಗೂ ನ್ಯಾಯಾಲಯಗಳಲ್ಲಿ ದಾಖಲಾಗಿರುವ ಇತರೆ ದಾವೆಗಳ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ.

P.R.637
SC.100

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ರಂಗನಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ, (ಸೇ.ಬಿ.&ಸಿ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ಆರ್ಥಿಕ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಆಇ 155 ರಾಲೆಪ 2016, ಬೆಂಗಳೂರು, ದಿನಾಂಕ:12.7.2016.**

**ವಿಷಯ:** ದಿನಾಂಕ: 1.1.2016ರಲ್ಲಿದ್ದಂತೆ ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಜಂಟಿ ನಿಯಂತ್ರಕರ/ಜಂಟಿ ನಿರ್ದೇಶಕರ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:**
1) ಸರ್ಕಾರದ ಆದೇಶ ಸಂಖ್ಯೆ:ಆಇ 41 ರಾಲೆಪ 2015, ದಿನಾಂಕ: 15.5.2015.
2) ಪ್ರಧಾನ ನಿರ್ದೇಶಕರು, ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆ ಇವರ ಪತ್ರ ಸಂಖ್ಯೆ: ಸಿಎಸ್‌ಎ 2 ಎಸ್‌ಎಂಎಸ್ 2016/230, ದಿನಾಂಕ: 26.4.2016 ಮತ್ತು 13.5.2016.

ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಯನ್ವಯ ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಅಪರ ನಿಯಂತ್ರಕರು, ಜಂಟಿ ನಿಯಂತ್ರಕರು ಮತ್ತು ಉಪ ನಿಯಂತ್ರಕರುಗಳ ವೃಂದಗಳ ಹುದ್ದೆಗಳನ್ನು ಸಂಪೂರ್ಣವಾಗಿ ಜೇಷ್ಠತೆ ಮತ್ತು ಅರ್ಹತೆ ಆಧಾರದ ಮೇಲೆ ಕ್ರಮವಾಗಿ ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಸಹಾಯಕ ನಿಯಂತ್ರಕರು, ಉಪ ನಿಯಂತ್ರಕರು ಮತ್ತು ಜಂಟಿ ನಿಯಂತ್ರಕರುಗಳ ವೃಂದದ ಅಧಿಕಾರಿಗಳಿಗೆ ಬಡ್ತಿ ನೀಡಿ ತುಂಬಬೇಕಾಗಿರುತ್ತದೆ.

